

# ತೈತ್ತಿರೀಯೋಪನಿಷತ್ತು
ಮತ್ತು
# ಐತರೇಯೋಪನಿಷತ್ತು

ಬರೆದವರು :
ಅದ್ವೈತ ಶಿಖಾಮಣಿ ಬ್ರಂ. ಶ್ರೀ ಶಿವಾನಂದ ಸ್ವಾಮಿಜಿ



ಪ್ರಕಾಶಕರು :
...ನಿಷತ್ಪ್ರಚಾರ ಪರಿಷತ್ತು



# ತೈತ್ತಿರೀಯೋಪನಿಷತ್ತು
ಮತ್ತು
# ಐತರೇಯೋಪನಿಷತ್ತು



ಬರೆದವರು :
**ಅದ್ವೈತ ಶಿಖಾಮಣಿ ಬ್ರಂ. ಶ್ರೀ ಶಿವಾನಂದ ಸ್ವಾಮಿಜಿ**

ಪ್ರಕಾಶಕರು :
ಉಪನಿಷತ್ಪ್ರಚಾರ ಪರಿಷತ್ತು

# ವಿಷಯಾನುಕ್ರಮಣಿಕೆ

ಪುಟ

## ಭೃಗುವಲ್ಲೀ



## ಐತರೇಯ ಉಪನಿಷತ್ತು

## ಸದಸ್ಯರು

ಎಸ್. ಲಕ್ಕಣ್ಣನವರು
ಕೆ. ಹೆಚ್. ಚಿಕ್ಕಣ್ಣಪ್ಪನವರು
ಕೆ. ಹೆಚ್. ತಿಮ್ಮಣ್ಣನವರು
ಕೆ. ಹೆಚ್. ಅಣ್ಣಯಪ್ಪನವರು
ಕೆ. ಜಿ. ಚಿಕ್ಕಣ್ಣಪ್ಪನವರು
ಎಲ್. ಮುನಿರಂಗಪ್ಪನವರು
ಬಿ. ಅಂದಾನಪ್ಪನವರು
ಬಿ. ಬೈರಪ್ಪ ಅಂಡ್ ಬ್ರದರ್ಸ್
ಬಿ. ಕೆ. ಶಿವಪ್ಪನವರು
ಕರಿಬಸಪ್ಪನವರು
ಶ್ರೀಮತಿ ಗಂಗಾಬಾಯಮ್ಮನವರು
ಶ್ರೀಮತಿ ವೆಂಕಟಮ್ಮನವರು
ಶ್ರೀಮತಿ ಕೆಂಚಮ್ಮನವರು
ಶ್ರೀಮತಿ ನಾಗರತ್ನಮ್ಮನವರು
ಶ್ರೀಮತಿ ವೆಂಗಟರತ್ನಮ್ಮನವರು
ಉಪನಿಷತ್ತು ಪ್ರಚಾರ ಸಮಿತಿಯವರು



ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರು



ಅದ್ವೈತ ಶಿಖಾಮಣಿ ಬ್ರ|| ಶ್ರೀ|| ಶಿವಾನಂದ ಸ್ವಾಮೀಜಿ

# ಮುನ್ನುಡಿ

ಆಧ್ಯಾತ್ಮಿಕ ವಿಚಾರಗಳಿಗೆ ಭಾರತೀಯರಷ್ಟು ಮಟ್ಟಿಗೆ ಪ್ರಪಂಚದ ಮತ್ಯಾವ ಜನಾಂಗದವರೂ ಗಮನ ಕೊಟ್ಟಿಲ್ಲ. ಭಾರತೀಯ ಅಧ್ಯವಸಾಯಕ್ಕೆ ತಕ್ಕ ಫಲವೂ ಲಭಿಸಿದೆ. ಆಗಲೋ ಈಗಲೋ ಆರಿ ಹೋಗುವಂತಿರುವ ಒಂದು ಬೆಂಕಿ ಕಿಡಿಯ ತೇಜಸ್ಸಿಗೂ, ಮಧ್ಯಾಹ್ನದ ಹೊತ್ತಿನಲ್ಲಿ ಜಗತ್ತನ್ನು ಬೆಳಗುವ ಸೂರ್ಯನ ತೇಜಸ್ಸಿಗೂ ಎಷ್ಟು ವ್ಯತ್ಯಾಸವುಂಟೋ ಅಷ್ಟೇ ವ್ಯತ್ಯಾಸವು ಯೂರೋಪಿನ ಅತ್ಯಂತ ಉದಾತ್ತ ತತ್ತ್ವಶಾಸ್ತ್ರಕ್ಕೂ, ಭಾರತೀಯ ತತ್ತ್ವಶಾಸ್ತ್ರಕ್ಕೂ ಇದೆಯೆಂದು ಜರ್ಮನಿ ದೇಶದ ಪ್ರಖ್ಯಾತ ತತ್ತ್ವಶಾಸ್ತ್ರ ವಿದ್ವಾಂಸನಾದ ಸ್ಕ್ಲೆಜೆಲ್ ಎಂಬಾತನು ಅಭಿಪ್ರಾಯ ಪಟ್ಟಿರುವುದೇ ಇದಕ್ಕೆ ಸಾಕ್ಷಿ. ಪ್ರಪಂಚದ ಆಧ್ಯಾತ್ಮಿಕ ಗ್ರಂಥಗಳಲ್ಲಿ ಉಪನಿಷತ್ತುಗಳು ಸರ್ವ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟವೆ. ಅನೇಕ ಪಾಶ್ಚಾತ್ಯ ವಿದ್ವಾಂಸರೂ, ಪೌರಸ್ತ್ಯ ವಿದ್ವಾಂಸರೂ ಉಪನಿಷತ್ತುಗಳ ಹಿರಿಮೆಯನ್ನು ಕೊಂಡಾಡಿದ್ದಾರೆ. ಅಸಂಖ್ಯಾತ ಜನರು ಉಪನಿಷತ್ತುಗಳ ಸಹಾಯದಿಂದ ಆತ್ಮ ಸಾಕ್ಷಾತ್ಕಾರವನ್ನು ಶಾಂತಿ ಸಂಪತ್ತನ್ನೂ ಪಡೆದಿದ್ದಾರೆ; ಇಹ ಪರಗಳೆರಡರಲ್ಲಿಯೂ ಸೌಖ್ಯವು ಲಭಿಸುವ ಅಮೂಲ್ಯ ಭಾಗ್ಯವನ್ನು ಕರಗತಮಾಡಿಕೊಂಡಿದ್ದಾರೆ. ಉಪನಿಷತ್ತುಗಳು ಪ್ರತಿಪಾದಿಸುವ ಉದಾತ್ತ ತತ್ತ್ವಗಳನ್ನು ಸ್ವಲ್ಪಮಟ್ಟಿಗಾದರೂ ಆಚರಣೆಗೆ ತಂದುಕೊಂಡಲ್ಲಿ ವ್ಯಕ್ತಿಗಳಾಗಲಿ, ಜನಾಂಗಗಳಾಗಲಿ, ಇಡೀ ಪ್ರಪಂಚವಾಗಲಿ ಶಾಂತಿ ಸಂಪತ್ತನ್ನು ಪಡೆಯುವುದರಲ್ಲಿ ಸಂದೇಹವಿಲ್ಲ; ಕ್ರೂರವಾದ ಹೋರಾಟಗಳೂ, ಘೋರ ಯುದ್ಧಗಳೂ ತಪ್ಪುವುದರಲ್ಲಿ ಸಂಶಯವಿಲ್ಲ.

ಉಪನಿಷತ್ತುಗಳನ್ನು ವ್ಯಾಸಂಗಮಾಡುವುದು ಸಂಸ್ಕೃತವನ್ನರಿಯದವರಿಗೆ ಸಾಧ್ಯವಿಲ್ಲ. ಅಂತಹವರು ಉಪನಿಷತ್ತುಗಳ ಸಾರನನ್ನರಿಯಲು ಸಹಾಯವಾಗುವಂತೆ ಅದ್ವೈತ ಶಿಖಾಮಣಿ ವೇ. ಬ್ರ. ಶ್ರೀ ಶಿವಾನಂದ ಸ್ವಾಮಿಗಳು ಈ ಮೊದಲೇ ಎಂಟು ಉಪನಿಷತ್ತುಗಳನ್ನು (ಅರ್ಥ ಸಮೇತವಾಗಿ) ಕನ್ನಡ

ಲಿಪಿಯಲ್ಲಿ ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಈ ಪುಸ್ತಕದಲ್ಲಿ ತೈತ್ತಿರೀಯೋಪ ನಿಷತ್ತನ್ನೂ ಐತರೇಯೋಪನಿಷತ್ತನ್ನೂ (ತಾತ್ಪರ್ಯ ಸಮೇತವಾಗಿ) ಕನ್ನಡ ಲಿಪಿಯಲ್ಲಿ ಪ್ರಕಟಿಸಿದ್ದಾರೆ. ಈ ಪುಸ್ತಕವನ್ನು ಪ್ರಕಟಿಸಿದ ಅವರ ಉದಾತ್ತ ವಾದ ಉದ್ದೇಶವು ಸಾರ್ಥಕವಾಗಲೆಂದೂ, ಈ ಪುಸ್ತಕದಿಂದ ಮುಮುಕ್ಷುಗಳಿಗೆ ಸಹಾಯವಾಗಲೆಂದೂ ಹಾರೈಸುತ್ತೇನೆ.

ಬೆಂಗಳೂರು,
ತಾ॥ ೨೬-೧೨-೧೯೫೮.

ಸಿ. ಕೆ. ವೆಂಕಟರಾಮಯ್ಯ

## ಪ್ರಾರ್ಥನೆ

ನನ್ನ ಅರಿಕೆ ಪ್ರಕಾರ ಮುನ್ನುಡಿಯನ್ನು ಬರೆದುಕೊಟ್ಟ, ಶ್ರೀಯುತ ಸಿ. ಕೆ. ವೆಂಕಟರಾಮಯ್ಯನವರಿಗೂ, ತಾಯಿನಾಡು ಸಂಪಾದಕರಾದ ಶ್ರೀಯುತ ತಿ. ಸಿದ್ದಪ್ಪನವರಿಗೂ ಮತ್ತು ಈ ಗ್ರಂಥದ ರಚನೆಗೆ ಹಿನ್ನೆಲೆಯಾಗಿ ನಿಂತಿರುವ ಚಂದಾದಾರರಿಗೂ ಮುಂದೆ ಸಹಾಯಮಾಡುವ ಮಹನೀಯರಿಗೂ ಮತ್ತು ವಾಚಕವೃಂದಕ್ಕೂ ಶ್ರೀ ಶಂಕರನು ಸಕಲ ಸೌಭಾಗ್ಯಗಳನ್ನೀಯಲಿ. ನನ್ನ ಈ ಸತ್ಕಾರ್ಯಕ್ಕೆ ಯತ್ಕಿಂಚಿತ್ತಾದರೂ ಸಹಾಯವು ಯಾರ್ಯಾರಿಂದ ಒದಗಿ ರುತ್ತೋ ಅವರಿಗೆಲ್ಲಾ ನನ್ನ ಹೃತ್ಪೂರ್ವಕ ವಂದನೆಗಳನ್ನರ್ಪಿಸಿರುತ್ತೇನೆ.

ಅನುವಾದಕ

ಓಂ

ಶ್ರೀ ಶಂಕರ ಸದ್ಗುರುಭ್ಯೋನಮಃ

# ತೈತ್ತಿರೀಯೋಪನಿಷತ್ತು

## ಶಿಕ್ಷಾವಲ್ಲೀ

### ಪ್ರಥಮ ಅನುವಾಕ

ಯಸ್ಮಾಜ್ಜಾತಂ ಜಗತ್ಸರ್ವಂ ಯಸ್ಮಿನ್ನೇವ ಪ್ರಲೀಯತೇ । ಯೇನೇದಂ ಧಾರ್ಯತೆ ಚೈವ ತಸ್ಮೈ ಜ್ಞಾನಾತ್ಮನೇ ನಮಃ ॥ ೧ ॥

ಯಾವುದರಿಂದೀ ಜಗತ್ತು ಹುಟ್ಟಿರುತ್ತೋ, ಯಾವುದರಲ್ಲೇ ಅಡಗಿ ಹೋಗುತ್ತೋ, ಯಾರಿಂದ ಈ ಜಗತ್ತು ಧರಿಸಲ್ಪಡುತ್ತೋ ಆ ಜ್ಞಾನಾತ್ಮನಾದ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ.

ಯೈರಿಮೇ ಗುರುಭಿಃ ಪೂರ್ವಂ ಪದವಾಕ್ಯಪ್ರಮಾಣತಃ । ವ್ಯಾಖ್ಯಾತಾಃ ಸರ್ವವೇದಾನ್ತಾಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಂ ॥ ೨ ॥

ಪೂರ್ವಕಾಲದಲ್ಲಿ ಯಾವ ದೊಡ್ಡವರು, ಪದ, ವಾಕ್ಯ ಮತ್ತು ಪ್ರಮಾಣಗಳ ವಿವೇಚನಾ ಪೂರ್ವಕ ಈ ಸಂಪೂರ್ಣ ವೇದಾಂತದ ವ್ಯಾಖ್ಯಾನಮಾಡಿರುತ್ತಾರೋ ಅವರಿಗೆ ನಾನು ಸದಾ ನಮಸ್ಕರಿಸುತ್ತೇನೆ.

ತೈತ್ತಿರೀಯಕಸಾರಸ್ಯ ಮಯಾಚಾರ್ಯಪ್ರಸಾದತಃ । ವಿಸ್ಪಷ್ಟಾರ್ಥರುಚೀನಾಂ । ಹಿ ವ್ಯಾಖ್ಯೇಯಂ ಸಂಪ್ರಣೀಯತೇ ॥ ೩ ॥

ತೈತ್ತಿರೀಯ ಉಪನಿಷತ್ತನ್ನರಿಯುವ ಇಚ್ಛಾವುಳ್ಳ ಪುರುಷರಿಗೆ (ಮುಮುಕ್ಷುಗಳಿಗೆ) ಆಚಾರ್ಯರ ಪ್ರಸಾದದಿಂದ ತೈತ್ತಿರೀಯ ಶಾಖೇಯ ಸಾರಭೂತ ಉಪನಿಷತ್ತನ್ನು ವ್ಯಾಖ್ಯಾನಮಾಡಲ್ಪಡುತ್ತೆ.

### ಶಿಕ್ಷಾವಲ್ಲಿಯ ಶಾನ್ತಿಪಾಠ

ಓಂ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇನ್ದ್ರೋ ಬೃಹಸ್ಪತಿಃ। ಶಂ ನೋ ವಿಷ್ಣುರುರುಕ್ರಮಃ ನಮೋ ಬ್ರಹ್ಮಣೇ। ನಮಸ್ತೇವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು ತದ್ವಕ್ತಾರಮವತು । ಅವತು ಮಾಂ । ಅವತು ವಕ್ತಾರಮ್ ॥

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

ಸೂರ್ಯನು ನಮಗೆ ಸುಖವನ್ನುಂಟುಮಾಡಲಿ. ವರುಣನು ನಮಗೆ ಸುಖವನ್ನುಂಟುಮಾಡಲಿ. ಸೂರ್ಯಾಭಿಮಾನಿ ದೇವತಾ ಆರ್ಯನು ನಮಗೆ ಸುಖವನ್ನುಂಟುಮಾಡಲಿ. ಇಂದ್ರನು ಮತ್ತು ಬೃಹಸ್ಪತಿಯು ನಮಗೆ ಶಾಂತಿ ಸುಖದಾಯಕವಾಗಲಿ. ರುರುಕ್ರಮ (ವಿಷ್ಣು)ನು ನಮಗೆ ಸುಖದಾಯಕನಾಗಲಿ. ವಾಯುರೂಪ ಬ್ರಹ್ಮನನ್ನು ನಾನು ನಮಸ್ಕರಿಸುತ್ತೇನೆ. ನೀನೇ ಪ್ರತ್ಯಕ್ಷ ಬ್ರಹ್ಮನಾಗಿದ್ದೀಯೇ. ನಿನ್ನನ್ನು ಪ್ರತ್ಯಕ್ಷ ಬ್ರಹ್ಮನೆಂದೇ ಹೇಳುತ್ತೇನೆ. ಶಾಸ್ತ್ರೋಕ್ತ ರೀತಿಯಾಗಿಯೇ ಹೇಳುತ್ತೇನೆ. ಸತ್ಯವಾಗಿಯೂ ಹೇಳುತ್ತೇನೆ. ವಿದ್ಯಾರ್ಥಿಯಾದ ನನಗೆ ವಿದ್ಯಾದಾನದ ದ್ವಾರ ರಕ್ಷಿಸಿ. ವಿದ್ಯಾದಾತೃವಾದ ಆಚಾರ್ಯರನ್ನು ರಕ್ಷಿಸಿ. ಶ್ರೋತಾ ವಕ್ತರಾದ ನಮ್ಮಿಬ್ಬರನ್ನು ರಕ್ಷಿಸಿ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪಗಳು ಶಾಂತಿಯಾಗಲಿ.

### ಶೀಕ್ಷಾಧ್ಯಾಯದ ಪ್ರಾರಂಭಃ

### ಎರಡನೆ ಅನುವಾಕ

### ಅರ್ಥಜ್ಞಾನದ ವ್ಯಾಖ್ಯಾನ

ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸನ್ತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ॥ ೧ ॥

ನಾವು ಶೀಕ್ಷಾ (ವರ್ಣೋಚ್ಚಾರಣ) ವಿದ್ಯೆಯನ್ನು ಪ್ರಾರಂಭಿಸುತ್ತೇವೆ. ವರ್ಣ, ಸ್ವರ, ಮಾತ್ರಾ, ಬಲ, ಸಾಮ, ಸಂತಾನಗಳನ್ನು ಪ್ರಾರಂಭಿಸು

ತ್ತೇವೆ. ವರ್ಣವೆಂದರೆ (ಅಕಾರಾದಿಗಳು) ಸ್ವರವೆಂದರೆ (ಉದಾತ್ತ ಅನುದಾತ್ತಾದಿ ಸ್ವರಗಳು) ಮಾತ್ರಾ ಎಂದರೆ (ಹ್ರಸ್ವ ದೀರ್ಘಾದಿಗಳು) ಬಲವೆಂದರೆ (ಶಕ್ತಿಯಿಂದುಚ್ಚರಿಸುವ ಶಬ್ದ) ಸಾಮವೆಂದರೆ (ಸಮಾನವಾದ ಉಚ್ಚಾರಣೆ) ಸಂತಾನವೆಂದರೆ (ಸಂಹಿತಾ).

## ಮೂರನೇ ಅನುವಾಕ

### ಸಂಹಿತೋಪಾಸನಾ

ಸಹ ನೌ ಯಶಃ । ಸಹ ನೌ ಬ್ರಹ್ಮ ವರ್ಚಸಮ್ । ಅಥಾತಃ ಸಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಞ್ಚಸ್ವಧಿಕರಣೇಷು । ಅಧಿಲೋಕಮಧಿಜ್ಯೋತಿಷಮಧಿವಿದ್ಯಾಮಧಿಪ್ರಜಾಮಧ್ಯಾತ್ಮಮ್ । ತಾ ಮಹಾ ಸಂಹಿತಾ ಇತ್ಯಾಚಕ್ಷತೇ । ಅಥಾಧಿಲೋಕಮ್ । ಪೃಥಿವೀ ಪೂರ್ವರೂಪಮ್ । ದ್ಯೌರುತ್ತರ ರೂಪಮ್ । ಆಕಾಶಃ ಸಂಧಿಃ ॥ ೧ ॥

ನಮ್ಮಿಬ್ಬರಿಗೂ (ಗುರು-ಶಿಷ್ಯ) ಯಶಸ್ಸು ಪ್ರಾಪ್ತಿಯಾಗಲಿ. ಹಾಗೆಯೇ ಬ್ರಹ್ಮತೇಜಸ್ಸು ಉಂಟಾಗಲಿ. ಈಗ ನಾವು ಐದು ಅಧಿಕರಣಗಳಲ್ಲಿ ಸಂಹಿತಾ ಸಂಬಂಧಿಯ ಉಪಾಸನಾ ಅಥವಾ ಉಪನಿಷತ್ತನ್ನು ಉಪಕ್ರಮಿಸುತ್ತೇವೆ. (ಅಧಿಲೋಕ, ಅಧಿಜ್ಯೌತಿಕ, ಅಧಿವಿದ್ಯಾ, ಅಧಿಪ್ರಜಾ ಮತ್ತು ಆಧ್ಯಾತ್ಮ, ಇವೈದಕ್ಕೆ ಅಧಿಕರಣವೆಂದು ಹೆಸರು). ಪಂಡಿತರು ಈ ಐದನ್ನು ಮಹಾ ಸಂಹಿತಾ ಎಂದು ಕರೆಯುತ್ತಾರೆ. ಈಗ ಅಧಿಲೋಕದ ವರ್ಣನೆಯನ್ನು ಮಾಡಲ್ಪಡುತ್ತೆ. ಸಂಹಿತೆಯು ಮೊದಲನೆ ವರ್ಣ ಪೃಥಿವಿ. ಅಂತಿಮ ವರ್ಣ ದ್ಯುಲೋಕ, ಮಧ್ಯಭಾಗವೆ ಆಕಾಶವಾಗಿರುತ್ತೆ.

ವಾಯುಃ ಸಂಧಾನಮ್ । ಇತ್ಯಧಿಲೋಕಮ್ । ಅಥಾದಿಜ್ಯೌತಿಷಮ್ । ಅಗ್ನಿಃ ಪೂರ್ವರೂಪಮ್ । ಆದಿತ್ಯಾ ಉತ್ತರರೂಪಮ್ । ಆಪಃ ಸಂಧಿಃ । ವೈದ್ಯುತಃ ಸಂಧಾನಮ್ । ಇತ್ಯಧಿಜ್ಯೌತಿಷಮ್ । ಅಥಾದಿವಿದ್ಯಮ್ । ಆಚಾರ್ಯಃ ಪೂರ್ವರೂಪಮ್ ॥ ೨ ॥

ವಾಯುವು ಸಂಧಾನವಾಗಿದೆ. ಅಧಿಲೋಕವೆ ದರ್ಶನವೆಂದು ಹೇಳಲ್ಪಡುತ್ತೆ. ಇದರನಂತರವೆ ಅಧಿಜ್ಯೋತಿ ದರ್ಶನವೆನ್ನಲ್ಪಡುತ್ತೆ. ಅಗ್ನಿಯು

ಪೂರ್ವರೂಪವಾಗಿದೆ. ಆದಿತ್ಯ ಉತ್ತರರೂಪವಾಗಿದೆ. ಜಲವು ಮಧ್ಯ ಲೋಕವಾಗಿದೆ. ವಿದ್ಯುತ್ (ಮಿಂಚು) ಸಂಧಾನವಾಗಿದೆ. (ಇದಕ್ಕೆ ಅಧಿಜ್ಯೋತಿ ದರ್ಶನವೆನ್ನಲ್ಪಡುತ್ತೆ). ಇದರನಂತರ ಅಧಿವಿಧ್ಯ ದರ್ಶನವೆನ್ನಲ್ಪಡುತ್ತೆ. ಇದರ ಪೂರ್ವರೂಪು ಆಚಾರ್ಯನೆಂದರಿಯಬೇಕು.

ಅನ್ತೇವಾಸ್ಯುತ್ತರ ರೂಪಮ್ । ವಿದ್ಯಾಸಂಧಿಃ । ಪ್ರವಚನಮ್ ಸಂಧಾನಮ್ । ಇತ್ಯಧಿ ವಿದ್ಯಮ್ । ಅಥಾಧಿಪ್ರಜಮ್ । ಮಾತಾ ಪೂರ್ವರೂಪಮ್ । ಪಿತೋತ್ತರರೂಪಮ್ । ಪ್ರಜಾಸಂಧಿಃ । ಪ್ರಜನನಮ್ಸಂಧಾನಮ್ । ಇತ್ಯಧಿ ಪ್ರಜಮ್ ॥ ೩ ॥

ಉತ್ತರ ರೂಪು ಶಿಷ್ಯನೆಂದು ತಿಳಿಯಬೇಕು. ವಿಧ್ಯಾಸಂಧಿಯಾಗಿರುತ್ತೆ. ಪ್ರವಚನ ಸಂಧಾನವಾಗಿದೆ. ಅಧಿವಿಧ್ಯಾದರ್ಶನವಾಗಿದೆ. ಇದರನಂತರ ಅಧಿ ಪ್ರಜಾ ದರ್ಶನವಾಗಿದೆ. ಮಾತಾ ಪೂರ್ವ ರೂಪವಾಗಿದೆ. ಪಿತಾ ಉತ್ತರರೂಪವಾಗಿದೆ. ಪ್ರಜಾ ಸಂಧಿಯಾಗಿದೆ. ಪ್ರಜನನ ಸಂಧಾನವಾಗಿದೆ. ಪ್ರಜನನವೆಂದರೆ (ಗರ್ಭದಾನ) ಇಲ್ಲಿ ಅಧಿಪ್ರಜಾ ಸಂಬಂಧಿ ಉಪಾಸನೆಯ ವರ್ಣನೆ ಮಾಡಿರುತ್ತೆ.

ಅಥಾಧ್ಯಾತ್ಮಮ್ । ಅಧರಾ ಹನುಃ ಪೂರ್ವರೂಪಮ್ । ಉತ್ತರಾಹನುರುತ್ತರ ರೂಪಮ್ । ವಾಕ್ಸಂಧಿಃ ಜಿಹ್ವಾ ಸಂಧಾನಮ್ । ಇತ್ಯಧ್ಯಾತ್ಮಮ್ । ಇತೀಮಾ ಮಹಾಸಂಹಿತಾ ಯ ಏವಮೇತಾ ಮಹಾಸಂಹಿತಾ ವ್ಯಾಖ್ಯಾತಾ ವೇದ । ಸಂಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗೇಣ ಲೋಕೇನ ॥ ೪ ॥

ಆಧ್ಯಾತ್ಮ ದರ್ಶನವಾಗಿದೆ. ಈ ಸಂಹಿತೆಯ ಪ್ರಥಮ ವರ್ಣ ಕೆಳಗಿನ ತುಟಿಯಾಗಿರುತ್ತೆ. ಉತ್ತರ ವರ್ಣ ಮೇಲಿನ ತುಟಿಯಾಗಿರುತ್ತೆ. ವಾಕ್ಕು ಸಂಧಿಯಾಗಿದೆ. ನಾಲಿಗೆ ಸಂಧಾನವಾಗಿರುತ್ತೆ. ಇಲ್ಲಿ (ಇದಕ್ಕೆ) ಆಧ್ಯಾತ್ಮ ದರ್ಶನವೆನ್ನಲ್ಪಡುತ್ತೆ. ಈ ರೀತಿ ಇದು ಮಹಾ ಸಂಹಿತೆ ಎಂದು ಕರೆಯಲ್ಪಡುತ್ತೆ. ಪೂರ್ವೋಕ್ತ ರೀತಿಯಾಗಿ ವ್ಯಾಖ್ಯಾನಮಾಡಿದ ಇದನ್ನು ಯಾವನು (ಮಹಾ ಸಂಹಿತೆಯನ್ನು) ಉಪಾಸನೆಮಾಡುತ್ತಾನೊ ಆಗ ಅವನು ಮಕ್ಕಳನ್ನು

ಹಸುಗಳನ್ನೂ, ಅನ್ನವನ್ನೂ, ಮತ್ತು ಬ್ರಹ್ಮತೇಜಸ್ಸನ್ನೂ ಸಹ ಸ್ವರ್ಗಲೋಕದಿಂದ ಸೇರಿಸಿಕೊಳ್ಳುತ್ತಾನೆ. ಅಂದರೆ ಉಪಾಸಕನಿಗೆ ಪೂರ್ವೋಕ್ತ ಪದಾರ್ಥಗಳ ಪ್ರಾಪ್ತಿಯಾಗುತ್ತೆ.

## ನಾಲ್ಕನೆ ಅನುವಾಕ

### ಶ್ರೀ ಸಂಪತ್ಪ್ರಾಪ್ತಿ ಸಾಧನಾ

ಯಶ್ಛನ್ದಸಾ ಮೃಷಭೋ ವಿಶ್ವರೂಪಃ । ಛನ್ದೋಭ್ಯೋಽಧ್ಯಮೃತಾತ್ಸಂಬಭೂವ । ಸ ಮೇನ್ದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯದೇ ವಧಾರಣೋ ಭೂಯಾಸಮ್ । ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಮ್ । ಬ್ರಹ್ಮಣಃ ಕೋಶೋಸಿ ಮೇಧಯಾ ಪಿಹಿತಃ । ಶ್ರುತಂ ಮೇ ಗೋಪಾಯ । ಆವಹನ್ತೀ ವಿತನ್ವಾನಾ ॥೧॥

ವೇದದಲ್ಲಿ ಯಾವುದು ವೃಷಭವಾಗಿದೆಯೋ ಅಂದರೆ ಶ್ರೇಷ್ಠವಾಗಿದೆಯೋ ಮತ್ತು ವಿಶ್ವರೂಪೂ ಆಗಿದೆಯೋ ಅದು ಓಂಕಾರವಾಗಿದೆ. ಈ ಓಂಕಾರವು ವೇದರೂಪ ಅಮೃತದಿಂದಲೆ ಹುಟ್ಟಿದೆ. ಈ ಓಂಕಾರರೂಪ ಇಂದ್ರನು (ಕಾಮಾಧೀಶನು) ನನ್ನ ಬುದ್ಧಿಯನ್ನು ಬಲಪಡಿಸಲಿ. ಎಲೈ ದೇವ! ನಾನು ಅಮೃತತ್ವದ ಸಾಧನ ಬ್ರಹ್ಮಜ್ಞಾನವನ್ನು ಧರಿಸತಕ್ಕವನಾಗುತ್ತೇನೆ. ನನ್ನ ಶರೀರವು ಜ್ಞಾನಾರ್ಹತೆಗೆ ಯೋಗ್ಯವಾಗಲಿ, ನನ್ನ ನಾಲಿಗೆ ಮಧುರ ಮಾತುಗಳನ್ನಾಡುವಂತ್ತಾದ್ದಾಗಲಿ. ನನ್ನ ಕಿವಿಯು ಹೆಚ್ಚಿನ ಬ್ರಹ್ಮ ವಿಷಯಗಳನ್ನು ಕೇಳುವಂತ್ತಾದ್ದಾಗಲಿ. ಎಲೈ! ಓಂಕಾರ! ನೀನು ಬ್ರಹ್ಮದ ಖಜಾನೆಯಾಗಿದ್ದಿಯೆ. ಲೋಕಬುದ್ಧಿಯ ದ್ವಾರನಿನ್ನನರಿಯಲು ಆಗುವುದಿಲ್ಲ. ನಾನು ಶ್ರವಣಮಾಡಿದ ಬ್ರಹ್ಮವಿದ್ಯೆಯ ರಕ್ಷಣೆಯನ್ನು ಮಾಡು. ಬ್ರಹ್ಮವಿದ್ಯೆಯು ಸದಾ ನನ್ನ ನೆನಪಿನಲ್ಲಿರುವಂತೆ ಅನುಗ್ರಹಿಸು.

ಕುರ್ವಾಣಾಚೀರಮಾತ್ಮನಃ । ವಾಸಾಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ । ಆಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ವಿಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ದಮಾ

ಯನ್ತು ಬ್ರಹ್ಮಚಾರಿಣಃ ಸ್ವಾಹಾ । ಶಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ ॥ ೨ ॥

ಹೇ ಓಂಕಾರವೇ! ವಸ್ತ್ರ, ಹಸು, ಅನ್ನಪಾನೀಯಗಳನ್ನು ಸರ್ವದಾ ಜಾಗ್ರತೆಯಲ್ಲಿ ತಂದುಕೊಡುವ ಮತ್ತು ಪೂರ್ವೋಕ್ತ ವಸ್ತುಗಳನ್ನು ವೃದ್ಧಿಗೊಳಿಸುವ ಶ್ರೀಯನ್ನು ತೆಗೆದುಕೊಂಡು ಬಾ! ಬ್ರಹ್ಮಚಾರಿಗಳು ನನ್ನ ಹತ್ತಿರ ಬರಲಿ. ಬ್ರಹ್ಮಚಾರಿಗಳು ನನ್ನ ಮುಂದೆ ನಿಷ್ಕಪಟದಿಂದ ವರ್ತಿಸಲಿ. ಬ್ರಹ್ಮಚಾರಿಗಳು ಯತಾರ್ಥ ಜ್ಞಾನವನ್ನು ಪಡೆಯಲಿ. ಬ್ರಹ್ಮಚಾರಿಗಳು ಇಂದ್ರಿಯ ನಿಗ್ರಹವುಳ್ಳವರಾಗಲಿ. ಬ್ರಹ್ಮಚಾರಿಗಳು ಮನೋನಿಗ್ರಹವುಳ್ಳವರಾಗಲಿ.

ಯಶೋ ಜನೇಽಸಾನಿ ಸ್ವಾಹಾ। ಶ್ರೇಯಾನ್ ವಸ್ಯಸೋಽಸಾನಿ ಸ್ವಾಹಾ। ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸ ಮಾ ಭಗ ಪ್ರವಿಶ ಸ್ವಾಹಾ । ತಸ್ಮಿನ್ ಸಹಸ್ರಶಾಖೇ ನಿಭಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಪಃ ಪ್ರವತಾಯನ್ತಿ ಯಥಾ ಮಾಸಾ ಅಹರ್ಜರಮ್ । ಏವಂ ಮಾಂ ಬ್ರಹ್ಮಚಾರಿಣೋ ಧಾತರಾಯನ್ತು ಸರ್ವತಃ ಸ್ವಾಹಾ। ಪ್ರತಿವೇಶೋಽಸಿ ಪ್ರ ಮಾ ಪಾಹಿ ಪ್ರ ಮಾ ಪದ್ಯಸ್ವ ॥ ೩ ॥

ನಾನು ಜನರಲ್ಲಿ ಯಶಸ್ವಿಯಾಗುತ್ತೇನೆ. ನಾನು ಅತ್ಯಂತ ಪ್ರಶಂಸನೀಯನಾಗುತ್ತೇನೆ. ಧನವಂತನಾಗುತ್ತೇನೆ. ಎಲೈ ಭಗವಂತನೆ! ಬ್ರಹ್ಮಕೋಶರೂಪನಾದ ನಿನ್ನಲ್ಲಿ ನಾನು ಪ್ರವೇಶಮಾಡುತ್ತೇನೆ. ನೀನು ನನ್ನಲ್ಲಿ ಪ್ರವೇಶಮಾಡು. ಉಪಾಧಿಯಿಂದ ಸಹಸ್ರಾರು ಶಾಖಾಯುಕ್ತನಾಗಿ ಕಂಡುಬರುವ ನಿನ್ನಲ್ಲಿ ನನ್ನ ಪಾಪಕರ್ಮಗಳನ್ನು ಶುದ್ಧಿಗೊಳಿಸುತ್ತೇನೆ. ಹೇಗೆ ನೀರು ಅಧೋಭಾಗದಲ್ಲಿ ಹೋಗುತ್ತೋ ತಿಂಗಳುಗಳು ಸಂವತ್ಸರದ ಅಂತರ್ಗತವಾಗಿ ಹೋಗುತ್ತೋ ಹಾಗೆಯೇ ಬ್ರಹ್ಮಚಾರಿಗಳು ಎಲ್ಲಾ ಕಡೆಗಳಿಂದಲೂ ನನ್ನ ಸಮೀಪಕ್ಕೆ ಬಂದು ಸೇರಲಿ. ಹೇ ಬ್ರಹ್ಮದೇವ! ನೀನು ವಿಶ್ರಾಂತಿಯ ಸ್ಥಾನವಾಗಿರುವಿ. ಅಥವಾ ದುಃಖನಿವೃತ್ತಿಯ ಸ್ಥಾನವಾಗಿರುವಿ. ನೀನು–ನನಗೆ ಪ್ರಕಾಶಿತನಾಗು. ನೀನು ನನಗೆ ಪ್ರಾಪ್ತನಾಗು. ಅಥವಾ ನಿನ್ನೊಡನೆ ನನಗೆ ಅಭಿನ್ನತೆಯನ್ನಾದರೂ ಮಾಡಿಕೊ ಅಂದರೆ ಒಂದು ಮಾಡಿಕೋ.

## ಐದನೆ ಅನುವಾಕ

### ಬ್ರಹ್ಮೋಪಾಸನಾ

ಭೂರ್ಭುವಃ ಸುವರಿತಿ ವಾ ಏತಸ್ತಿಸ್ರೋ ವ್ಯಾಹೃತಯಃ । ತಾಸಾಮು ಹ ಸ್ಮೈತಾಂ ಚತುರ್ಥೀಂ ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಙ್ಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯನ್ತರಿಕ್ಷಮ್ । ಸುವರಿತ್ಯಸೌಲೋಕಃ ॥ ೧ ॥

ಭೂ, ಭುವಃ, ಮತ್ತು ಸುವಃ, ಇವು ಮೂರು ವ್ಯಾಹೃತಿಗಳಾಗಿವೆ. ಇವುಗಳಲ್ಲಿ ಮಹಃ ವ್ಯಾಹೃತಿಯನ್ನು ಮಹಾ ಚಮಸನ ಮಗನು ತಿಳಿಯುತ್ತಾನೆ. ಮಹಃ ಎನ್ನುವುದೆ ಬ್ರಹ್ಮವಾಗಿದೆ. ಅದೇ ಆತ್ಮವೂ ಆಗಿದೆ. ಬೇರೆ ದೇವತೆಗಳು ಅದರ ಅವಯುವಗಳಾಗಿರುತ್ತಾರೆ. ಭೂಃ ಎನ್ನುವುದೇ ಈ ಲೋಕವಾಗಿದೆ. ಭುವಃ ಅನ್ನುವುದು ಅಂತರಿಕ್ಷ ಲೋಕವಾಗಿದೆ. ಸುವಃ ಎನ್ನುವುದು ಸ್ವರ್ಗಲೋಕವಾಗಿದೆ.

ಮಹ ಇತ್ಯಾದಿತ್ಯಃ। ಆದಿತ್ಯೇನ ವಾವ ಸರ್ವೇಲೋಕಾ ಮಹೀಯನ್ತೇ। ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚನ್ದ್ರಮಾಃ । ಚನ್ದ್ರಮಸಾ ವಾವ ಸರ್ವಾಣಿ ಜ್ಯೋತೀಂಷಿ ಮಹೀಯನ್ತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಂಷಿ ॥ ೨ ॥

ಮಹಃ ಆದಿತ್ಯವಾಗಿದೆ. ಆದಿತ್ಯನಿಂದಲೇ ಎಲ್ಲಾ ಲೋಕಗಳು ವೃದ್ಧಿ ಹೊಂದುತ್ತವೆ. ಭೂಃ ಅಗ್ನಿಯಾಗಿದೆ. ಭುವಃ ವಾಯುವಾಗಿದೆ. ಸುವಃ ಆದಿತ್ಯವಾಗಿದೆ. ಮಹಃ ಚಂದ್ರಮನಾಗಿದ್ದಾನೆ. ಚಂದ್ರನಿಂದಲೇ ಎಲ್ಲಾ ಜ್ಯೋತಿಗಳು ವೃದ್ಧಿಹೊಂದುತ್ತಲಿದೆ. ಭೂಃ ಋಕ್ಕಾಗಿದೆ. ಭುವಃ ಸಾಮವಾಗಿದೆ. ಸುವಃ ಯಜುಸ್ಸಾಗಿದೆ.

ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇವೇದಾ ಮಹೀಯನ್ತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿವ್ಯಾನಃ । ಮಹ ಇತ್ಯನ್ನಮ್ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯನ್ತೇ । ತಾ ವಾ ಏತಾಶ್ಚತ

ಪ್ರಶ್ಚತುರ್ಥೀ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹನ್ತಿ ॥ ೩ ॥

ಮಹಃ ಬ್ರಹ್ಮವಾಗಿದೆ. ಬ್ರಹ್ಮನಿಂದಲೇ ಎಲ್ಲಾ ವೇದಗಳು ವೃದ್ಧಿ ಹೊಂದುತ್ತದೆ. ಭೂಃ ಪ್ರಾಣವಾಗಿದೆ. ಭುವಃ ಅಪಾನವಾಗಿದೆ. ಸುವಃ ವ್ಯಾನವಾಗಿದೆ. ಮಹಃ ಅನ್ನವಾಗಿದೆ. ಅನ್ನದಿಂದಲೇ ಸಮಸ್ತ ಪ್ರಾಣಗಳು ವೃದ್ಧಿಹೊಂದುತ್ತದೆ. ಈ ರೀತಿಯಾಗಿ ಇವು ನಾಲ್ಕು ವ್ಯಾಹೃತಿಗಳಾಗಿವೆ. ಅವುಗಳು ಪ್ರತ್ಯೇಕವಾಗಿ ನಾಲ್ಕು ನಾಲ್ಕು ಪ್ರಕಾರವುಳ್ಳದ್ದಾಗಿವೆ. ಇದನ್ನು ಅರಿತವನು ಬ್ರಹ್ಮವನ್ನರಿಯುತ್ತಾನೆ. ಅರಿತವನಿಗೆ ಎಲ್ಲಾ ದೇವತೆಗಳು ಉಪಹಾರವನ್ನು ಸಮರ್ಪಿಸುವರು.

## ಆರನೆ ಅನುವಾಕ

### ಹೃದಯಾಕಾಶದ ವಿವರಣೆ

ಸ ಯ ಏಷೋಽನ್ತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅನ್ತರೇಣ ತಾಲುಕೇ । ಯ ಏಷ ಸ್ತನ ಇವಾವಲಮ್ಬತೇ । ಸೇನ್ದ್ರಯೋನಿಃ । ಯತ್ರಾಸೌ ಕೇಶಾನ್ತೋ ವಿವರ್ತತೇ ! ವ್ಯಪೋಹ್ಯ ಶೀರ್ಷ ಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ ॥ ೧ ॥

ಹೃದಯ ಮಧ್ಯದಲ್ಲಿ ಯಾವ ಆಕಾಶವಿರುತ್ತೋ ಅಲ್ಲಿ ಮನೋಮಯನೂ. ಅಮೃತಮಯನೂ ಆದ ಹಿರಣ್ಮಯ ಪುರುಷನು ಇರುವನು. ನಡುನೆತ್ತಿಯ ಮಧ್ಯದಲ್ಲಿ ಎದೆಗಳಂತೆ ಜೋಲಾಡುವ ಒಂದು ನಾಡಿ ಇರುತ್ತೆ. ಅದಕ್ಕೆ ಸುಷುಮ್ನಾ ನಾಡಿ ಎನ್ನುತ್ತಾರೆ. ಅದು ಕೂದಲುಗಳ ಮೂಲಭಾಗವನ್ನು ಬೇರ್ಪಡಿಸಿ ಇರುತ್ತದೆ. ಅದು ಮೂರ್ಧ ಪ್ರದೇಶದಲ್ಲಿರುವ ಮಸ್ತಕದ ಕಪಾಲಗಳನ್ನು ಭೇದಿಸಿಕೊಂಡು ಹೋಗಿರುತ್ತೆ. ಅದಕ್ಕೆ ಇಂದ್ರಯೋನಿ ಎಂದು ಹೆಸರು. (ಅಂದರೆ ಪರಮಾತ್ಮನನ್ನು ಪಡೆಯುವ ಮಾರ್ಗವೆಂದರ್ಥವಾಗುತ್ತೆ.) ಭೂಃ ಅನ್ನುವುದು ಅಗ್ನಿಯಲ್ಲಿ ಸ್ಥಿತವಾಗಿದೆ. ಅಂದರೆ ಅಗ್ನಿರೂಪದಿಂದ ಲೋಕದಲ್ಲಿ ವ್ಯಾಪಕವಾಗಿದೆ. ಭುವಃ ಇದು ವಾಯುವಿನಲ್ಲಿ ಸ್ಥಿತವಾಗಿದೆ (ವಾಯು ರೂಪವಾಗಿದೆ.)

ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸ್ಪತಿಮ್ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನ ಪತಿಃ ಎತತ್ತತೋ ಭವತಿ । ಆಕಾಶ ಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾ ರಾಮಂ ಮನ ಆನನ್ದಮ್ । ಶಾನ್ತಿಸಮೃದ್ಧಮಮೃತಮ್ । ಇತಿ ಪ್ರಾಚೀನ ಯೋಗ್ಯೋಪಾಸ್ಸ್ವ ॥ ೨ ॥

ಸುವಃ ಇದು ಆದಿತ್ಯರೂಪವಾಗಿದೆ. ಹಾಗೆಯೇ ಮಹಃ ಬ್ರಹ್ಮವಾಗಿದೆ. ಉಪಾಸಕನು ಹೀಗೆ ಧ್ಯಾನಮಾಡುವುದರಿಂದ ಬ್ರಹ್ಮರೂಪವೇ ಆಗುತ್ತಾನೆ. ಸ್ವರಾಜ್ಯವನ್ನು ಪಡೆಯುತ್ತಾನೆ. ತನ್ನ ಮನಸ್ಸಿಗಧಿಪತಿ (ಬ್ರಹ್ಮ) ಯನ್ನು ಪಡೆಯುತ್ತಾನೆ. ವಾಣಿಗಧಿಪತಿ, ನೇತ್ರಾಧಿಪತಿ, ಶ್ರೋತ್ರಾಧಿಪತಿ, ಸರ್ವ ವಿಜ್ಞಾನಾಧಿಪತಿ ಆಗಿ ಹೋಗುತ್ತಾನೆ. ಇವುಗಳಿಗಿಂತಲೂ ಅಧಿಕ ತರವಾದ ಅಧಿಪತಿಯಾಗುತ್ತಾನೆ. ಆಕಾಶವೇ ಶರೀರ, ಸತ್ಯವೇ ಸ್ವರೂಪ, ಪ್ರಾಣಾ ರಾಮ, ಮನಸ್ಸೇ ಆನಂದ, ಶಾಂತಿಯೆ ಸಂಪತ್ತು, ಅಮೃತವೆ ಸ್ವರೂಪವುಳ್ಳ ಬ್ರಹ್ಮವಾಗುತ್ತಾನೆ. ಹೇ ಪ್ರಾಚೀನ ಯೋಗ್ಯ ಶಿಷ್ಯ! ಹೀಗೆ ನೀನು ಉಪಾಸನೆ ಮಾಡು.

## ಏಳನೆ ಅನುವಾಕ

### ಬ್ರಹ್ಮೋಪಾಸನೆ

ಪೃಥಿವ್ಯನ್ತರಿಕ್ಷಂ ದ್ಯೌರ್ದಿಶೋಽವಾನ್ತರದಿಶಃ । ಅಗ್ನಿರ್ವಾಯುರಾದಿತ್ಯ ಶ್ಚನ್ದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್ । ಪ್ರಾಣೋವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋವಾಕ್ ತ್ವಕ್ । ಚರ್ಮಮಾಂಸಂಸ್ನಾ ವಾಸ್ಥಿಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಙ್ಕ್ತಂ ವಾ ಇದಂ ಸರ್ವಂ । ಪಾಙ್ಕ್ತೇನೈವ ಪಾಙ್ಕ್ತಂ ಸ್ಪೃಣೋತೀತಿ ॥ ೧ ॥

ಭೂಮಿ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು ಮತ್ತು ಅವಾಂತರ ದಿಕ್ಕುಗಳು, ಅಗ್ನಿ, ವಾಯು, ಆದಿತ್ಯ, ಚಂದ್ರಮ ಮತ್ತು ನಕ್ಷತ್ರಗಳು, ಜಲ, ಓಷಧಿ, ವನಸ್ಪತಿಗಳು, ಆಕಾಶ ಮತ್ತು ಆತ್ಮ, ಈವು ಮೂರಕ್ಕು(ಅಂದರೆ

ಲೋಕ, ದೇವ, ಭೂತ) ಅಧಿಭೂತ ಪಾಙ್ಕ್ತವೆಂದು ಕರೆಯುತ್ತಾರೆ. ಪ್ರಾಣ, ವ್ಯಾನ, ಅಪಾನ, ಉದಾನ, ಸಮಾನ, ಚಕ್ಷು, ಶ್ರೋತ್ರ, ಮನಸ್ಸು, ವಾಕ್ಕು ತ್ವಕ್ಕು, ಮಾಂಸ, ಸ್ನಾಯು, ಅಸ್ತಿ, ಮಜ್ಜೆ, ಇವು ಮೂರಕ್ಕು ಅಂದರೆ (ವಾಯು, ಇಂದ್ರಿಯಗಳು, ಧಾತುಗಳು,) ಆಧ್ಯಾತ್ಮ ಪಾಙ್ಕ್ತವೆನ್ನುತ್ತಾರೆ. ಈ ಪಾಙ್ಕ್ತೋಪಾಸನದ ವಿಧಾನವನ್ನು ಹಿಂದಿನ ಋಷಿಗಳು ತಿಳಿಸಿರುತ್ತಾರೆ. ಆಧ್ಯಾತ್ಮಿಕವಾದ ಈ ಉಪಾಸನೆಗಳನ್ನು ಯಾವ ಉಪಾಸಕನು ಮಾಡಿ ಪೂರ್ಣ ಗೊಳಿಸುತ್ತಾನೋ ಅವನು ಪ್ರಜಾಪತಿಯ ಸ್ವರೂಪವೇ ಆಗಿಹೋಗುತ್ತಾನೆ.

## ಎಂಟನೆ ಅನುವಾಕ

### ಓಂಕಾರೋಪಾಸನಾ

ಓಮಿತಿ ಬ್ರಹ್ಮ । ಓಮಿತೀದಂ ಸರ್ವಮ್ । ಓಮಿತ್ಯೇ ತದನುಕೃತಿರ್ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯನ್ತಿ । ಓಮಿತಿ ಸಾಮಾನಿ ಗಾಯನ್ತಿ । ಓಂ ಶೋಮಿತಿ ಶಸ್ತ್ರಾಣಿ ಶಂಸನ್ತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿ ಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ । ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈ ವೋಪಾಪ್ನೋತಿ ॥ ೧ ॥

ಓಂಕಾರವೆ ಬ್ರಹ್ಮವಾಗಿದೆ. ಏಕೆಂದರೆ! ಓಂಕಾರವೆ ಸರ್ವರೂಪ ವಾಗಿದೆ. ಇದು ಸರ್ವತ್ರ ಪ್ರಸಿದ್ಧವಾಗಿದೆ. ಓಂಕಾರವೆ ಸಮ್ಮತಿ ಸೂಚಕ ವಾದ ಸಂಕೇತವಾಗಿದೆ. ಯಜ್ಞ ಕಂಬಕ್ಕೆ ಪೂರ್ವ ಓಂಕಾರದ ಶ್ರವಣವನ್ನು ಮಾಡಿಸುತ್ತಾರೆ. ಓಂಕಾರವನ್ನುಚ್ಚರಿಸಿ, ಸಾಮುಗಾನಮಾಡುತ್ತಾರೆ. ಓಂ ಕಾರವನ್ನುಚ್ಚರಿಸಿದನಂತರ ಶಾಸ್ತ್ರಪಾಠ ಪ್ರಾರಂಭಮಾಡುತ್ತಾರೆ. ಅದ್ವರ್ಯು ಜನರೂ ಸಹ ಪ್ರತ್ಯೇಕ ಕರ್ಮಕ್ಕೂ ಮೊದಲು ಓಂಕಾರವನ್ನು ಹೇಳಿಸುತ್ತಾರೆ. ಓಂಕಾರವನ್ನು ಹೇಳಿಸಿದನಂತರ ಬ್ರಹ್ಮನನ್ನರಿಯಲು ಅಪ್ಪಣೆ ಕೊಡುತ್ತಾರೆ. ಓಂಕಾರ ಹೇಳಿಸಿ ಅಗ್ನಿಹೋತ್ರ ಕರ್ಮಮಾಡಲು ಆಜ್ಞೆಮಾಡುತ್ತಾರೆ. ವೇದಾ ಧ್ಯಾಯಿಯಾದವನು ಸಹ ಓಂಕಾರವನ್ನುಚ್ಚರಿಸಿಯೇ ವೇದವನ್ನೋದಲು ಉಪ ಕ್ರಮಿಸುತ್ತಾನೆ. ಉಪಾಸಕನು ಓಂಕಾರವನ್ನುಚ್ಚರಿಸಿ ಬ್ರಹ್ಮನನ್ನು ಹೊಂದು

ತ್ತಾನೆ. (ಖಂಡಿತವಾಗಿಯೂ ಬ್ರಹ್ಮವನ್ನೇ ಹೊಂದುತ್ತಾನೆ.) ಓಂಕಾರ ಪೂರ್ವಕ ಆಗುವ ಎಲ್ಲಾ ವ್ಯವಹಾರಗಳು ವಿಶೇಷಫಲವುಳ್ಳವುಗಳಾಗುತ್ತೆ. ಅಂದರೆ ಉಪಾಸಕ ರೆಲ್ಲರೂ ಓಂಕಾರವನ್ನು ಬಿಡದೆ ಉಚ್ಚರಿಸಿ ತಮ್ಮ ಕಾರ್ಯಕ್ಕೆ ಕೈ ಹಾಕಬೇಕು.

## ಒಂಭತ್ತನೆ ಅನುವಾಕ

### ಶುಭಕರ್ಮಗಳ ಅತ್ಯವಶ್ಯಕತೆ

ಋತಂ ಚ ಸ್ವಾಧ್ಯಾಯ ಪ್ರವಚನೇ ಚ | ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ | ತಪಶ್ಚ ಸ್ವಾಧ್ಯಾಯಾಯ ಪ್ರವಚನೇ ಚ | ದಮಶ್ಚ ಸ್ವಾಧ್ಯಾಯ ಪ್ರವಚನೇಚ | ಶಮಶ್ಚ ಸ್ವಾಧ್ಯಾಯ ಪ್ರವಚನೇಚ | ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇಚ | ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇಚ | ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇಚ | ಮಾನುಷಂ ಚ ಸ್ವಾಧ್ಯಾಯ ಪ್ರವಚನೇಚ | ಪ್ರಜಾಚ ಸ್ವಾಧ್ಯಾಯ ಪ್ರವಚನೇಚ | ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇಚ | ಪ್ರಜಾತಿಶ್ಚ ಸ್ವಾಧ್ಯಾಯ ಪ್ರವಚನೇಚ | ಸತ್ಯ ಮಿತಿ ಸತ್ಯವಚಾ ರಾಥೀತರಃ | ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ | ತದ್ಧಿ ತಪಸ್ತದ್ಧಿ ತಪಃ || ೧ ||

ಋತ ಸ್ವಾಧ್ಯಾಯ ಮತ್ತು ಪ್ರವಚನ ಇವು ಮೂರು ಅನುಷ್ಠಾನ ಯೋಗ್ಯವಾದವುಗಳು. ಋತವೆಂದರೆ (ಶಾಸ್ತ್ರಜನಿತ) ಅರ್ಥದ ನಿಶ್ಚಯ. ಅಧ್ಯಯನವೆಂದರೆ ವೇದಪಾಠರೂಪ ಯಜ್ಞ. ಪ್ರವಚನವೆಂದರೆ, ಅಧ್ಯಯನ ಅಥವಾ ಬ್ರಹ್ಮಯಜ್ಞದ ಹೆಸರಾಗಿದೆ. ಸತ್ಯ ಮತ್ತು ಸ್ವಾಧ್ಯಾಯ ಪ್ರವಚನವು ಅನುಷ್ಠಾನ ಯೋಗ್ಯವಾದವುಗಳು. ದಮ ಮತ್ತು ಸ್ವಾಧ್ಯಾಯ ಪ್ರವಚನಗಳು ಅನುಷ್ಠಾನ ಯೋಗ್ಯವಾದವುಗಳು. ಮನೋನಿಗ್ರಹ ಮತ್ತು ಸ್ವಾಧ್ಯಾಯ ಪ್ರವಚನಗಳು ಅನುಷ್ಠಾನ ಯೋಗ್ಯವಾದವುಗಳಾಗಿರುತ್ತೆ. ಅಗ್ನಿಹೋತ್ರ, ಅತಿಥಿ ಸತ್ಕಾರ, ಮಾನುಷೋಚಿತ ಕರ್ಮಗಳು, ಪ್ರಜೋತ್ಪತ್ತಿ ಕರ್ಮಗಳು, ಸ್ವಾಧ್ಯಾಯ ಪ್ರವಚನಗಳು ಸತ್ಯವಾಗಿಯೂ ಅನುಷ್ಠಾನ ಯೋಗ್ಯವಾದವುಗಳು. ಇದು ರಥೀತರನ ಪುತ್ರ ಸತ್ಯವಚನಿಗೆ ಸಮ್ಮತವಾಗಿದೆ. ತಪೋನಿಷ್ಠ ಪಾರುಶಿಷ್ಠಿಯ ಅಭಿಪ್ರಾಯವು ಹೀಗೆಯೇ ಇರುತ್ತೆ. ಮುದ್ಗಲನ ಮಗ ನಾಕನ

ಅಭಿಪ್ರಾಯವು ಸಹ ಹೀಗೆಯೇ ಇರುತ್ತೆ. ಆದ್ದರಿಂದ ಸ್ವಾಧ್ಯಾಯ ಮತ್ತು ಪ್ರವಚನವೇ ತಪವಾಗಿರುತ್ತೆ. ತಪವಾಗಿರುತ್ತೆಂದು ತಿಳಿಯಬೇಕು.

## ಹತ್ತನೆ ಅನುವಾಕ

### ತ್ರಿಶಂಕುವಿನ ವೇದವಚನ

ಅಹಂ ವೃಕ್ಷಸ್ಯ ರೇರಿವಾ | ಕೀರ್ತಿಃ ಪೃಷ್ಠಂ ಗಿರೇರಿವ | ಊರ್ಧ್ವ ಪವಿತ್ರೋ ವಾಜಿನೀವ ಸ್ವಮೃತಮಸ್ಮಿ | ದ್ರವಿಣಂ ವರ್ಚಸಮ್ | ಸುಮೇಧಾ ಅಮೃತೋಕ್ಷಿತಃ | ಇತಿ ತ್ರಿಶಙ್ಕೋ ರ್ವೇದಾನುವಚನಮ್ ॥ ೧ ॥

ನಾನು ವೃಕ್ಷದ ಪ್ರೇರಕನಾಗಿರುವೆನು. ನನ್ನ ಕೀರ್ತಿ ಪರ್ವತದ ಶಿಖರ ಸದೃಶ ಎತ್ತರವಾಗಿದೆ. ಊರ್ಧ್ವ ಮತ್ತು ಪವಿತ್ರವಾಗಿದೆ. "ಅನ್ನರೂಪ ಸೂರ್ಯನಂತೆ" ನಾನು ಅಮೃತಮಯನಾಗಿರುವೆನು. ಧನವಂತನು ಜ್ಞಾನ ವಂತನು, ಪ್ರಕಾಶಮಾನನು, ಅಮರಣ ರೂಪನು, ಅವ್ಯಯನು ಆಗಿರುವೆನು. ಅಥವಾ ಅಮೃತದಿಂದ ನೆನೆಯಲ್ಪಟ್ಟವನು ಆಗಿರುವೆನು. ಇದು ತ್ರಿಶಂಕು ಋಷಿಯ ವೇದವಚನವಾಗಿರುತ್ತೆ.

## ಹನ್ನೊಂದನೆ ಅನುವಾಕ

### ಶೀಕ್ಷೋಪದೇಶ

ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ | ಸತ್ಯಂವದ | ಧರ್ಮಂಚರ | ಸ್ವಾಧ್ಯಾಯಾನ್ಮಾಪ್ರಮದಃ | ಆಚಾರ್ಯಾಯ ಪ್ರಿಯಂಧ ನಮಾಹೃತ್ಯ ಪ್ರಜಾತನ್ತುಂ ಮಾ ವ್ಯವಚ್ಛೇತ್ಸೀಃ | ಸತ್ಯಾನ್ನ ಪ್ರಮದಿತವ್ಯಮ್ | ಧರ್ಮಾನ್ನ ಪ್ರಮದಿತವ್ಯಮ್ | ಕುಶಲಾನ್ನ ಪ್ರಮದಿತವ್ಯಮ್ | ಭೂತ್ಯೈನ ಪ್ರಮದಿತವ್ಯಮ್ | ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್ ||೧||

ವೇದಾಧ್ಯಯನದನಂತರ ಆಚಾರ್ಯನು, ಶಿಷ್ಯನಿಗೆ ಉಪದೇಶಿಸುತ್ತಾನೆ. ಸತ್ಯ ಹೇಳು! ಧರ್ಮವನ್ನಾಚರಿಸು! ಸ್ವಾಧ್ಯಾಯದ ವಿಷಯದಲ್ಲಿ ಉದಾಸೀನ ನಾಗಬೇಡ! ಆಚಾರ್ಯರಿಗೆ ಅಭೀಷ್ಟ (ಕೇಳಿದಷ್ಟು) ಧನವನ್ನು ಕೊಟ್ಟು ಸಂತೋಷಗೊಳಿಸು! ಆಚಾರ್ಯರ ಆಜ್ಞೆಯಂತೆ ಪಾಣಿಗ್ರಹಣ ಮಾಡಿಕೋ!

ಸಂತಾನದ ನಾಶಕನಾಗದಿರು! ಪ್ರಮಾದವಶಾತ್ ಸತ್ಯಭ್ರಷ್ಟನಾಗಬೇಡ! ಪ್ರಮಾದದಿಂದ ಧರ್ಮಬಿಡಬೇಡ! ಪ್ರಮಾದದಿಂದ ಆತ್ಮರಕ್ಷಣೆ ಮಾಡಿಕೊಳ್ಳುವುದನ್ನು ಮರೆಯದಿರು! ಸಂಪತ್‌ದಾಯಕವಾದ ಮಂಗಳಕಾರ್ಯವನ್ನು ಬಿಡಬೇಡ! ಸ್ವಾಧ್ಯಾಯ ಮತ್ತು ಪ್ರವಚನಗಳನ್ನು ಮರೆಯಬೇಡ.

ದೇವಪಿತೃ ಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋಭವ । ಆಚಾರ್ಯ ದೇವೋಭವ । ಅತಿಥಿದೇವೋಭವ । ಯಾನ್ಯನವಧ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ ಯಾನ್ಯಸ್ಮಾಕಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ ॥ ೨ ॥

ದೇವಕಾರ್ಯ ಪಿತೃಕಾರ್ಯಗಳನ್ನು ಬಿಡಬೇಡ! ತಾಯಿಯಲ್ಲಿ ದೇವ ಭಾವನೆ ಉಳ್ಳವನಾಗು! ತಂದೆಯಲ್ಲಿ ದೇವಭಾವನೆ ಉಳ್ಳವನಾಗು! ಆಚಾರ್ಯರಲ್ಲಿ ದೇವಭಾವನೆ ಉಳ್ಳವನಾಗು! ಅತಿಥಿಯಲ್ಲಿ ದೇವಭಾವನೆ ಉಳ್ಳವನಾಗು! ಅನಿಂದಿತವಾದ ಕೆಲಸಗಳನ್ನು ಮಾಡುವವನಾಗು! ನಿಂದಿತ ಕಾರ್ಯ ಮಾಡಬೇಡ! ದೊಡ್ಡವರು ಆಚರಿಸಿದ ಶುಭಾಚರಣೆಗಳ ಉಪಾಸನೆಯನ್ನೇ ಮಾಡು.

ನೋ ಇತರಾಣಿ । ಯೇಕೇಚಾಸ್ಮಚ್ಛ್ರೇಯಾಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾದೇಯಮ್ । ಅಶ್ರದ್ಧಯಾದೇಯಮ್ । ಶ್ರಿಯಾ-ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ ॥ ೩ ॥

ಬೇರೆ ಅಶುಭಕಾರ್ಯಗಳನ್ನು ಮಾಡದಿರು! ಆಚಾರ್ಯಾದಿ ಲಕ್ಷಣಗಳು ಯಾರಲ್ಲಿರುತ್ತೋ ಅವರೆ ದೊಡ್ಡವರು! ಅವರೆ ಬ್ರಾಹ್ಮಣರು! ಅವರೆ ಶ್ರೇಷ್ಠರು! ಆಚಾರ್ಯರನ್ನು ಭಜಿಸಬೇಕು! ಪೂಜಿಸಬೇಕು! ಅವರ ಶ್ರಮ ನಿವಾರಣೆಮಾಡಬೇಕು! ಏನು ಕೊಟ್ಟರೂ ಶ್ರದ್ಧಾಪೂರ್ವಕವಾಗಿ ಕೊಡಬೇಕು! ಅಶ್ರದ್ಧೆಯಿಂದ ಕೊಡಬಾರದು! ಸಂಪತ್ತನ್ನು ತನ್ನ ಶಕ್ತ್ಯಾನುಸಾರ ಕೊಡಬೇಕು! ಲಜ್ಜೆಯಿಂದ ಕೊಡಬೇಕು! ಹೆದರಿ ಹೆದರಿ ಕೊಡಬೇಕು! ಮೈತ್ರ್ಯಾದಿ

ಕಾರ್ಯ ನಿಮಿತ್ತದಿಂದ ಕೊಡಬೇಕು. ನಾನು ಹೇಳಿದ ವಿಷಯದಲ್ಲಿ ಏನಾದರೂ ನಿನಗೆ ಸಂಶಯ ಸಂಭವಿಸೀತು!

ಯೇತತ್ರ ಬ್ರಾಹ್ಮಣಾಃ ಸಮರ್ಶಿನಃ। ಯುಕ್ತಾಆಯುಕ್ತಾಃ। ಅಲೂಕ್ಷಾ ಧರ್ಮಕಾಮಾಃ ಸ್ಯುಃ। ಯತಾ ತೇ ತತ್ರವರ್ತೇರನ್। ತಥಾ ತತ್ರವರ್ತೇಥಾಃ। ಅಥಾಭ್ಯಾಖ್ಯಾತೇಷು। ಯೇ ತತ್ರ ಬ್ರಾಹ್ಮಣಾಃ ಸಮರ್ಶಿನಃ। ಯುಕ್ತಾ ಆಯುಕ್ತಾಃ। ಅಲೂಕ್ಷಾ ಧರ್ಮಕಾಮಾಃ ಸ್ಯುಃ। ಯಥಾ ತೇ ತೇಷು ವರ್ತೇರನ್। ತಥಾ ತೇಷು ವರ್ತೇಥಾಃ। ಏಷ ಆದೇಶಃ। ಏಷ ಉಪದೇಶಃ। ಏಷಾ ವೇದೋಪನಿಷತ್। ಏತದನುಶಾಸನಮ್। ಏವಮುಪಾಸಿತವ್ಯಮ್ ಏವಮು ಚೈತದುಪಾಸ್ಯಮ್ ॥ ೪ ॥

ವಿಚಾರ ಶೀಲರು, ಕರ್ಮ ಪರಾಯಣರು, ಧರ್ಮಾಭಿಲಾಷಿಗಳು, ಧರ್ಮ ಪರಾಯಣರು ಆದ ಬ್ರಾಹ್ಮಣರ ಸಂಸರ್ಗದಲ್ಲಿದ್ದು ಅವರಂತೆ ನಡೆ. ಅಥವಾ ಯಾರ ವಿಷಯದಲ್ಲಿ ದೋಷಾರೋಪಿತವಾಗಿದೆಯೋ! ಅವರ ವಿಷಯದಲ್ಲಿ ವಿಚಾರಶೀಲರೂ, ಕರ್ಮದಲ್ಲಿ ನಿಯುಕ್ತರು, ಅಯುಕ್ತರು, (ಬೇರೊಬ್ಬರಿಂದ ಪ್ರಯುಕ್ತರಾಗದವರು) ಸರಳ ಹೃದಯಸ್ಥರು, ಧರ್ಮಾಭಿಲಾಷಿಯಾದ ಬ್ರಾಹ್ಮಣರು, ಹೇಗೆ ವರ್ತಿಸುತ್ತಾರೋ ನೀನು ಹಾಗೆಯೇ ವ್ಯವಹರಿಸು. ಇದೇ ಉಪದೇಶ! ಇದೇ ಆದೇಶ! ಇದೇ ವೇದೋಪನಿಷತ್ತು ಮತ್ತು ಈಶ್ವರಿಯ ಆಜ್ಞಾರೂಪ! ಉಪದೇಶವೆಂದು ತಿಳಿ. ಹೀಗೆಯೇ ಪೂರ್ವೋಕ್ತ ಉಪಾಸನೆಯನ್ನು ಮಾಡಬೇಕು. ಹೀಗೆಯೇ ಆಚರಣೆಯನ್ನು ಇಟ್ಟುಕೊಳ್ಳಬೇಕು. ಮೂರು ಬಗೆಯ ತಾಪಗಳು ಶಾಂತಿಯಾಗಲಿ.

ಶ್ರೀ ಶಂಕರಸದ್ಗುರವೇ ನಮಃ

# ತೈತ್ತಿರೀಯ ಉಪನಿಷತ್ತು

## ಬ್ರಹ್ಮಾನಂದವಲ್ಲೀ

### ಮೊದಲನೆ ಅನುವಾಕ

ಬ್ರಹ್ಮಾನಂದವಲ್ಲಿಯ ಶಾಂತಿಪಾಠ

ಓಂ ಸಹನಾವವತು ಸಹನೌಭುನಕ್ತು ಸಹವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾ ವಹೈ ॥
ಓಂ ಶಾಂತಿಃ ಶಾಂತಿಃ ಶಾಂತಿಃ

**ಕ್ರಮಸೃಷ್ಟಿ — ಅನ್ನ ವಿಕಾರದ ವರ್ಣನ — ಬ್ರಹ್ಮಜ್ಞಾನದ ಫಲ**

ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನ ಮನಸ್ತಂಬ್ರಹ್ಮ । ಯೋವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ । ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶ್ಯಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್ । ಅನ್ನಾತ್ಪುರುಷಃ । ಸ, ವಾ, ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ । ಅಯಂ ದಕ್ಷಿಣಃಪಕ್ಷಃ । ಅಯಂ ಉತ್ತರಃಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ೧ ॥

ಬ್ರಹ್ಮವೇತ್ತಾ ಪುರುಷನು ಪರಮಾತ್ಮನನ್ನು ಹೊಂದುತ್ತಾನೆ. (ಬ್ರಹ್ಮವನ್ನು ತನ್ನ ಆತ್ಮರೂಪವಾಗಿ ತಿಳಿಯುತ್ತಾನೆ.) ಆ ವಿಷಯದಲ್ಲಿ ಶ್ರುತಿಯು ಸಹ ಹೇಳಲ್ಪಡುತ್ತೆ. ಬ್ರಹ್ಮನು ಸತ್ಯಸ್ವರೂಪನು. ಜ್ಞಾನ ಸ್ವರೂಪನು. ಅನಂತನು. ಪರಬ್ರಹ್ಮನನ್ನು ಯಾವ ಪುರುಷನು ಬುದ್ಧಿರೂಪ ಉತ್ಕೃಷ್ಟ ಆಕಾಶದಲ್ಲಿ ಸ್ಥಿತನಾಗಿ

ರುವನೆಂದು ತಿಳಿಯುತ್ತಾನೋ? ಆಗ, ಆ ಸರ್ವಜ್ಞನು ಬ್ರಹ್ಮಸ್ವರೂಪದಿಂದ ಒಂದೇ ಕಾಲದಲ್ಲಿ ಎಲ್ಲಾ ಭೋಗಗಳನ್ನು ಪಡೆಯುತ್ತಾನೆ (ಅನುಭವಿಸುತ್ತಾನೆ). ಆ ಆತ್ಮನಿಂದಲೇ ಆಕಾಶವು ಹುಟ್ಟಿತು. ಆಕಾಶದಿಂದ ಗಾಳಿ ಹುಟ್ಟಿತು. ಗಾಳಿಯಿಂದ ಅಗ್ನಿ, ಅಗ್ನಿಯಿಂದ ಜಲ (ನೀರು), ಜಲದಿಂದ ಭೂಮಿ, ಭೂಮಿಯಿಂದ ಓಷಧಿಗಳು, ಓಷಧಿಗಳಿಂದ ಅನ್ನ, ಅನ್ನದಿಂದ ವೀರ್ಯ, ವೀರ್ಯದಿಂದ ಪುರುಷನು ಹುಟ್ಟಿದನು. ಆ, ಈ, ಪುರುಷನೇ ಅನ್ನರಸದ ವಿಕಾರವಾಗಿದ್ದಾನೆ. ಅವನ ಈ ಶಿರಸ್ಸೇ ಶಿರಸ್ಸಾಗಿದೆ. ದಕ್ಷಿಣಬಾಹುವೇ(ಬಲಭಾಗ) ದಕ್ಷಿಣಪಕ್ಷ (ರೆಕ್ಕೆ)ವಾಗಿದೆ. ಉತ್ತರಬಾಹುವೇ (ಎಡಭುಜ) ಉತ್ತರ ಪಕ್ಷ (ರೆಕ್ಕೆ)ವಾಗಿದೆ. ಈ ಆತ್ಮ ಆತ್ಮವಾಗಿದೆ (ಮಧ್ಯ ಭಾಗವಾಗಿದೆ). ಈ ಕೆಳಗಿನ ಭಾಗವೇ (ಪುಚ್ಛ) ಆಧಾರವಾಗಿದೆ. ಅವನ ವಿಷಯದಲ್ಲೇ ಈ ಶ್ಲೋಕವು (ಮಂತ್ರವು) ಹೇಳಿದುದಾಗಿದೆ.

## ಎರಡನೆ ಅನುವಾಕ

### ಅನ್ನಮಹಿಮಾ—ಪ್ರಾಣಮಯ ಕೋಶದ ವರ್ಣನ

ಅನ್ನಾದ್ವೈಪ್ರಜಾಃ ಪ್ರಜಾಯನ್ತೇ । ಯಾಃ ಕಾಶ್ಚಪೃಥಿವೀಂಶ್ರಿತಾಃ ಅಥೋ ಅನ್ನೇನೈವ ಜೀವನ್ತಿ । ಅಥೈನದಪಿ ಯನ್ತ್ಯನ್ತತಃ । ಅನ್ನಂಹಿ ಭೂತಾನಾಂ ಜ್ಯೇಷ್ಠಮ್ ॥ ತಸ್ಮಾತ್ಸರ್ವೌಷಧಮುಚ್ಯತೆ । ಸರ್ವಂ ವೈತೇಽನ್ನಮಾಪ್ನುವನ್ತಿ ಯೇಽನ್ನಂ ಬ್ರಹ್ಮೋಪಾಸತೇ । ಅನ್ನಂಹಿ ಭೂತಾನಾಂ ಜ್ಯೇಷ್ಠಮ್ ತಸ್ಮಾತ್ಸರ್ವೌಷ ಧಮುಚ್ಯತೆ । ಅನ್ನಾದ್ಭೂತಾನಿ ಜಾಯನ್ತೇ । ಜಾತಾನ್ಯನ್ನೇನ ವರ್ಧಂತೇ । ಅಧ್ಯತೇಽತ್ತಿಚ ಭೂತಾನಿ ॥ ತಸ್ಮಾದನ್ನಂತದುಚ್ಯತ ಇತಿ । ತಸ್ಮಾದ್ವಾ ಏತಸ್ಮಾದನ್ನರಸಮಯಾದನ್ಯೋಽನ್ತರ ಆತ್ಮಾ ಪ್ರಾಣಮಯಃ । ತೇನೈಷಪೂರ್ಣಃ । ಸ, ವಾ, ಏಷ ಪುರುಷ ವಿಧ ಏವ । ತಸ್ಯಪುರುಷ ವಿಧತಾಮನ್ವಯಂ ; ಪುರುಷ ವಿಧಃ । ತಸ್ಯಪ್ರಾಣ ಏವಶಿರಃ । ವ್ಯಾನೋದಕ್ಷಿಣಃ ಪಕ್ಷಃ । ಅಪಾನ ಉತ್ತರಃಪಕ್ಷಃ । ಆಕಾಶ ಆತ್ಮಾ । ಪೃಥಿವೀಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ೧ ॥

ಪೃಥಿವಿ (ಭೂಮಿ) ಗಾಶ್ರಿತರಾಗಿ ಎಲ್ಲಾ ಪ್ರಜೆ (ಪ್ರಾಣಿವರ್ಗ) ಗಳಿರುವರು! ಅವರೆಲ್ಲರು ಅಥವಾ ಅವುಗಳೆಲ್ಲವು ಅನ್ನದಿಂದಲೇ ಹುಟ್ಟುವುವು.

ನಂತರ ಅನ್ನದಿಂದಲೇ ಜೀವಿಸುತ್ತವೆ. ಕಡೆಗೆ ಅದರಲ್ಲೇ ವಿಲೀನವಾಗಿ ಹೋಗುತ್ತವೆ. ಏಕೆಂದರೆ, ಅನ್ನವೇ ಪ್ರಾಣಿವರ್ಗಕ್ಕೆಲ್ಲ ಜ್ಯೇಷ್ಠವಾಗಿದೆ (ಪ್ರಾಣಿಗಳಿಗೆಲ್ಲ ಮೊದಲು ಹುಟ್ಟಿರುತ್ತೆ). ಆದುದರಿಂದಲೆ ಆ ಅನ್ನಕ್ಕೆ ಸರ್ವೌಷಧವೆಂದು ಕರೆಯಲ್ಪಡುತ್ತೆ (ಎಲ್ಲಾ ಪ್ರಾಣಿಗಳ ಹಸಿವನ್ನು ಶಮನಮಾಡುವುದರಿಂದ ಸರ್ವೌಷಧವೆಂದು ಹೆಸರು). ಕೆಲವರು "ಅನ್ನವೇ ಬ್ರಹ್ಮ" ವೆಂದರಿತು ಉಪಾಸನೆಮಾಡುತ್ತಾರೆ. ಆದುದರಿಂದ ಅವರು ನಿಶ್ಚಯವಾಗಿಯೂ ಸಂಪೂರ್ಣವಾದ ಅನ್ನವನ್ನು ಪಡೆಯುತ್ತಾರೆ. ಏಕೆಂದರೆ, ಅನ್ನ ಪ್ರಾಣಿವರ್ಗಕ್ಕೆಲ್ಲ ದೊಡ್ಡದಾಗಿರುತ್ತೆ. ಆದುದರಿಂದಲೆ ಆ ಅನ್ನಕ್ಕೆ ಸರ್ವೌಷಧವೆನ್ನುತ್ತಾರೆ. ಅನ್ನದಿಂದಲೇ ಪ್ರಾಣಿಸಮೂಹವೆಲ್ಲ ಹುಟ್ಟುತ್ತೆ. ಹುಟ್ಟಿದ ಪ್ರಾಣಿಗಳು ಆ ಅನ್ನದಿಂದಲೇ ವೃದ್ಧಿಹೊಂದುತ್ತವೆ. ಅನ್ನವು ಪ್ರಾಣಿಗಳ ದ್ವಾರ ತಿನ್ನಲ್ಪಡುತ್ತೆ ಮತ್ತು ಪ್ರಾಣಿಸಮೂಹವನ್ನು ತಿನ್ನುತ್ತೆ. ಆದುದರಿಂದಲೆ ಅನ್ನವೆನ್ನಲ್ಪಡುತ್ತೆ. ಇಲ್ಲಿಯವರೆಗೂ ಅನ್ನಮಹಿಮಾ ಅಥವಾ ಅನ್ನೋಪಾಸನೆ ಎಂದು ತಿಳಿಯಬೇಕು. ಆ, ಈ, ಆನ್ನರಸಮಯದಿಂದ ಬೇರೆಯಾದ ಅಂತರಾತ್ಮ(ಒಳಗಡೆ ಇರುವವನು)ನು ಪ್ರಾಣಮಯನು(ಪ್ರಾಣಮಯಕೋಶ) ಎಂದರಿಯಬೇಕು. ಆ ಪ್ರಾಣಮಯ ಕೋಶದಿಂದ ಈ ಅನ್ನಮಯ ಕೋಶವು ಪೂರ್ಣ (ತುಂಬಿರುತ್ತೆ) ವಾಗಿರುತ್ತೆ. ಆ, ಈ, ಪ್ರಾಣಮಯಕೋಶವು ಪುರುಷಾಕಾರವಾಗಿ ಕಲ್ಪಿತವಾಗಿದೆ. ಹಿಂದೆ ಹೇಳಿದ ಅನ್ನಮಯವು ಪುರುಷಾಕೃತಿ ತಾಳಿದ (ಕಲ್ಪಿತವಾದ ಹಾಗೆ) ಹಾಗೆ ಪ್ರಾಣಮಯ ಕೋಶವು ಪುರುಷಾಕಾರವಾಗಿ ಕಲ್ಪಿತವಾಗಿದೆ. ಅದರ ಪ್ರಾಣವೇ ಶಿರಸ್ಸಾಗಿದೆ. ವ್ಯಾನವೇ ಬಲಭಾಗದ ರೆಕ್ಕೆಯಾಗಿದೆ. ಅಪಾನವೇ ಎಡಭಾಗದ ರೆಕ್ಕೆಯಾಗಿದೆ. ಆಕಾಶವೇ ಮಧ್ಯಭಾಗವಾಗಿದೆ. ಭೂಮಿಯು ಪುಚ್ಛ(ಬಾಲ)ವಾಗಿದೆ. ಅಂದರೆ ಆಧಾರವಾಗಿದೆ. ಪ್ರಾಣಮಯ ಆತ್ಮನ ವಿಷಯದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ.

## ಮೂರನೆ ಅನುವಾಕ

### ಪ್ರಾಣದ ಮಹಿಮೆ ಮತ್ತು ಮನೋಮಯ ಕೋಶದ ವರ್ಣನೆ

ಪ್ರಾಣಂದೇವಾ ಅನುಪ್ರಾಣನ್ತಿ । ಮನುಷ್ಯಾಃ ಪಶವಶ್ಚಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ಸರ್ವಾಯುಷಮುಚ್ಯತೆ । ಸರ್ವಮೇವ

ತಆಯುರ್ಯಂತಿ ಯೇ ಪ್ರಾಣಂ ಬ್ರಹ್ಮೋಪಾಸತೇ। ಪ್ರಾಣೋಹಿ ಭೂತಾನಾಮಾಯುಃ। ತಸ್ಮಾತ್ಸರ್ವಾಯುಷ ಮುಚ್ಯತ ಇತಿ। ತಸ್ಯೈಷ ಏವ ಶಾರೀರ ಆತ್ಮಾಯಃ ಪೂರ್ವಸ್ಯ।। ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾ ದನ್ಯೋಽನ್ತರ ಆತ್ಮಾ ಮನೋಮಯಃ॥ ತೇನೈಷ ಪೂರ್ಣಃ ಸ, ವಾ, ಏಷ ಪುರುಷ ವಿಧ ಏವ ತಸ್ಯ ಪುರುಷ ವಿಧತಾಮನ್ವಯಂ ಪುರುಷ ವಿಧಃ । ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ ಆದೇಶ ಆತ್ಮಾ । ಅಥರ್ವಾಜಂರಸಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ೧ ॥

ದೇವತೆಗಳು, ಮನುಷ್ಯರು ಮತ್ತು ಪಶುಗಳು ಪ್ರಾಣದ ಅನುಗಾಮಿಗಳಾಗಿರುವರು (ಪ್ರಾಣಕ್ರಿಯೆಯಿಂದಲೆ ಕೆಲಸಮಾಡುತ್ತಾರೆ). ಪ್ರಾಣವೇ ಪ್ರಾಣಿಗಳ ಆಯುಃ (ಜೀವನ) ವಾಗಿರುತ್ತೆ. ಆದುದರಿಂದಲೇ ಪ್ರಾಣವು ಸರ್ವರ ಆಯುಃ (ಜೀವನ) ಎನಿಸಿಕೊಳ್ಳುತ್ತೆ. ಯಾರು ಪ್ರಾಣವನ್ನು "ಬ್ರಹ್ಮರೂಪದಿಂದ" ಉಪಾಸಿಸುತ್ತಾರೋ ಅವರು ಪೂರ್ಣಾಯುವನ್ನು ಪಡೆಯುತ್ತಾರೆ. ಪ್ರಾಣವೇ ಪ್ರಾಣಿಗಳ ಜೀವನವಾಗಿರುತ್ತೆ. ಆದುದರಿಂದಲೇ ಪ್ರಾಣವನ್ನು ಎಲ್ಲಾ ಪ್ರಾಣಿಗಳ ಜೀವನವೆಂದು ಹೇಳಲ್ಪಡುವುದು. ಪ್ರಾಣಮಯವು ಪೂರ್ವೋಕ್ತ(ಅನ್ನಮಯ ಕೋಶ) ಶರೀರಾಂತರ್ಗತ ಆತ್ಮವಾಗಿದೆ. ಆ, ಈ, ಪ್ರಾಣಮಯಕೋಶಕ್ಕೆ ಒಳಗಾಗಿಯೂ, ಬೇರಾಗಿಯೂ ಇರುವ ಆತ್ಮಾ ಮನೋಮಯವಾಗಿದೆ. ಮನೋಮಯ ಕೋಶದಿಂದ ಪ್ರಾಣಮಯ ಕೋಶವು ತುಂಬಲ್ಪಟ್ಟಿರುತ್ತೆ. ಇಲ್ಲಿ ಮನೋಮಯ ಕೋಶವು ಪುರುಷಾಕಾರವಾಗಿದೆ. ಪ್ರಾಣಮಯದಂತೆಯೇ ಮನೋಮಯ ಕೋಶವು ಪುರುಷಾಕೃತಿಯಲ್ಲೇ ಇರುತ್ತೆ. ಯಜುರ್ವೇದ ಅದರ ತಲೆಯಾಗಿದೆ. ಋಗ್ವೇದವು ಅದರ ಬಲಭಾಗದ ರೆಕ್ಕೆಯಾಗಿರುತ್ತೆ. ಸಾಮವೇದವು ಎಡಭಾಗದ ರೆಕ್ಕೆಯಾಗಿರುತ್ತೆ. ವೇದದ ಬ್ರಾಹ್ಮಣ ಭಾಗವು ಆತ್ಮಾ (ಮಧ್ಯಭಾಗ) ವಾಗಿದೆ. ಅಥರ್ವಾಜ್ಞಿರಸವು ಪುಚ್ಛವಾಗಿದೆ (ಆಧಾರವಾಗಿದೆ). ಆ ವಿಷಯದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ.

## ನಾಲ್ಕನೆ ಅನುವಾಕ

### ಮನೋಮಯ ಕೋಶದ ಮಹಿಮ ತಥಾ ವಿಜ್ಞಾನಮಯ ಕೋಶದ ವರ್ಣನ

ಯತೋವಾಚೋ ನಿವರ್ತನ್ತೇ | ಅಪ್ರಾಪ್ಯ ಮನಸಾ ಸಹ || ಆನಂದಂ ಬ್ರಹ್ಮಣೋ ವಿದ್ವಾನ್ | ನಬಿಭೇತಿ ಕದಾಚನೇತಿ | ತಸ್ಯೈಷ ಏವ ಶಾರೀರ ಆತ್ಮಾ | ಯಃ ಪೂರ್ವಸ್ಯ | ತಸ್ಮಾದ್ವಾ ಏತಸ್ಮಾನ್ಮನೋ ಮಯಾದನ್ಯೋಽನ್ತರ ಆತ್ಮಾ ವಿಜ್ಞಾನಮಯಸ್ತೇನೈಷಪೂರ್ಣಃ | ಸ, ವಾ, ಏಷ ಪುರುಷ ವಿಧ ಏವ | ತಸ್ಯ ಪುರುಷ ವಿಧತಾಮನ್ವಯಂ ಪುರುಷ ವಿಧಃ | ತಸ್ಯ ಶ್ರದ್ಧೈವ ಶಿರಃ | ಋತಂ ದಕ್ಷಿಣಃಪಕ್ಷಃ | ಸತ್ಯಮುತ್ತರಃ ಪಕ್ಷಃ | ಯೋಗ ಆತ್ಮಾ | ಮಹಃ ಪುಚ್ಛಂ ಪ್ರತಿಷ್ಠಾ | ತದಪ್ಯೇಷ ಶ್ಲೋಕೋ ಭವತಿ || ೪ ||

ಮನಸಹಿತವಾದ ವಾಣಿಯು ಯಾವ (ಬ್ರಹ್ಮ) ದನ್ನು ಪಡೆಯದೆ ಹಿಂತಿರುಗುತ್ತೋ, ಅದು ಆನಂದರೂಪ ಬ್ರಹ್ಮವೆಂದು ತಿಳಿಯಬೇಕು. ಆ ಆನಂದ ರೂಪ ಬ್ರಹ್ಮವನ್ನು ತಿಳಿಯುವ ಪುರುಷನು ಯಾವಾಗಲೂ ಭಯವನ್ನು ಹೊಂದುವುದಿಲ್ಲ. ಈ ಯಾವ ಮನೋಮಯ ಶರೀರವು ಹಿಂದೆ ಹೇಳಿದ ಪ್ರಾಣಮಯ ಕೋಶ ಶರೀರದ ಆತ್ಮವಾಗಿದೆ. ಆ ಮನೋಮಯ ಕೋಶಕ್ಕಿಂತಲೂ ಬೇರೆಯಾದ, ಈ ವಿಜ್ಞಾನಮಯ ಕೋಶವು ಮನೋಮಯ ಕೋಶದ ಅಂತರಾತ್ಮವಾಗಿದೆ. ವಿಜ್ಞಾನಮಯ ಕೋಶದಿಂದ ಮನೋಮಯ ಕೋಶವು ತುಂಬಿರುತ್ತೆ. ಆ, ಈ ವಿಜ್ಞಾನಮಯ ಕೋಶವು ಕೂಡ ಪುರುಷಾಕಾರವಾಗಿದೆ. ಮನೋಮಯದಂತೆಯೇ ವಿಜ್ಞಾನಮಯ ಕೋಶವು ಪುರುಷಾಕಾರವಾಗಿದೆ. ಶ್ರದ್ಧೆಯೇ ವಿಜ್ಞಾನಮಯ ಕೋಶದ ಶಿರಸ್ಸಾಗಿದೆ. ಋತ (ಶಾಸ್ತ್ರೋಕ್ತ ಪ್ರಕಾರ ನಿಶ್ಚಿತ ಅರ್ಥ) ವು ಬಲಭಾಗದ ರೆಕ್ಕೆಯಾಗಿದೆ. ಸತ್ಯವು ಉತ್ತರಭಾಗದ ರೆಕ್ಕೆಯಾಗಿದೆ. ಯೋಗವು (ಮಧ್ಯಭಾಗ) ಆತ್ಮವಾಗಿದೆ. ಮಹತತ್ವವು ಪುಚ್ಛವಾಗಿದೆ (ಆಧಾರವಾಗಿದೆ). ಆ ವಿಷಯದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ,

## ಐದನೆ ಅನುವಾಕ

### ವಿಜ್ಞಾನದ ಮಹಿಮೆ—ಆನಂದಮಯ ಕೋಶದ ವರ್ಣನೆ

ವಿಜ್ಞಾನಂಯಜ್ಞಂತನುತೇ । ಕರ್ಮಾಣಿತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೆ ಪಾಪ್ಮನೋಹಿತ್ವಾ । ಸರ್ವಾನ್ಕಾಮಾನ್ಸ ಮಶ್ನುತ ಇತಿ । ತಸ್ಯೈಷ ಏವ ಶಾರೀರ ಆತ್ಮಾಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾದನ್ಯೋಽನ್ತರ ಆತ್ಮಾನಂದಮಯಃ । ತೇನೈಷ ಪೂರ್ಣಃ । ಸ, ವಾ, ಏಷ ಪುರುಷವಿಧ ಏವ । ತಸ್ಯಪುರುಷ ವಿಧತಾಮನ್ವಯಂ ಪುರುಷ ವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮಪುಚ್ಛಂ ಪ್ರತಿಷ್ಠಾ ॥ ತದ ಪ್ಯೇಷ ಶ್ಲೋಕೋ ಭವತಿ ॥ ೧ ॥

ವಿಜ್ಞಾನ (ತಿಳಿದವನು) ವು ಯಜ್ಞದ ವಿಷಯವನ್ನು ವಿಸ್ತಾರಪಡಿಸುತ್ತೆ. ಮತ್ತು ಕರ್ಮದ ವಿಷಯವನ್ನೂ ವಿಸ್ತಾರಪಡಿಸುತ್ತೆ. ಎಲ್ಲಾ ದೇವತೆಗಳು ಜ್ಯೇಷ್ಠ ವಿಜ್ಞಾನ ಬ್ರಹ್ಮದ ಉಪಾಸನೆಮಾಡುತ್ತಾರೆ. ಸಾಧಕನು ವಿಜ್ಞಾನವೇ ಬ್ರಹ್ಮವೆಂದು ತಿಳಿಯಬೇಕು. ಮತ್ತು ಸಾಧನೆಯನ್ನು ಮುಂದುವರಿಸಬೇಕು. ಆ ವಿಷಯದಲ್ಲಿ ಪ್ರಮಾದಗೊಳ್ಳಬಾರದು (ಮರೆಯಬಾರದು). ಆಗ ಆ ಸಾಧಕನು ತನ್ನ ಶರೀರಸಂಬಂಧವಾದ ಎಲ್ಲಾ ಪಾಪಗಳನ್ನು ಕಳೆದುಕೊಳ್ಳು ತ್ತಾನೆ. ಮತ್ತು ಎಲ್ಲಾ ಕಾಮನೆಗಳನ್ನು (ಭೋಗಗಳನ್ನು) ಪಡೆದುಕೊಳ್ಳು ತ್ತಾನೆ. ಈ ವಿಜ್ಞಾನಮಯವೇ ತನ್ನ ಪೂರ್ವವರ್ತಿ ಮನೋಮಯಕೋಶದ (ಶರೀರ) ಆತ್ಮವಾಗಿದೆ. ಆ, ಈ, ವಿಜ್ಞಾನಮಯ ಕೋಶದಿಂದ ಆನಂದ ಮಯ ಕೋಶವು ಬೇರೆಯಾಗಿದೆ. ಮತ್ತು ಅಂತರವರ್ತಿ (ಒಳಗಡೆ)ಯಾಗಿದೆ. ಆನಂದಮಯ ಕೋಶದಿಂದ ವಿಜ್ಞಾನಮಯ ಕೋಶವು ತುಂಬಲ್ಪಟ್ಟಿದೆ. ಆ, ಈ, ಆನಂದಮಯ ಕೋಶವು ಕೂಡ ಪುರುಷಾಕಾರವಾಗಿದೆ. ಹಿಂದೆ ಹೇಳಿದ ವಿಜ್ಞಾನಮಯ ಕೋಶದಂತೆಯೆ ಇದು ಕೂಡ ಪುರುಷಾಕಾರವಾಗಿದೆ. ಪ್ರಿಯವೆ ಆನಂದಮಯ ಕೋಶದ ಶಿರಸ್ಸಾಗಿದೆ. ಮೋದ ಬಲಭಾಗದ ರೆಕ್ಕೆ. ಪ್ರಮೋದವೆ ಎಡಭಾಗದ ರೆಕ್ಕೆಯಾಗಿದೆ. ಆನಂದವೆ ಆತ್ಮವಾಗಿದೆ (ಮಧ್ಯಭಾಗ). ಬ್ರಹ್ಮವೆ

ಪುಚ್ಛವಾಗಿದೆ. ಅಂದರೆ ಆಧಾರವಾಗಿದೆ. ಆ ವಿಷಯದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ.

## ಆರನೆ ಅನುವಾಕ

**ಬ್ರಹ್ಮವನ್ನು ಸತ್ ಮತ್ತು ಅಸತ್ ರೂಪವಾಗಿ ತಿಳಿಯತಕ್ಕವರ ಭೇದ -- ಬ್ರಹ್ಮವೇತ್ತರು – ಅಬ್ರಹ್ಮವೇತ್ತರು ಬ್ರಹ್ಮವನ್ನು ಪಡೆಯುವ ವಿಷಯದಲ್ಲಾಗುವ ಶಂಕೆ - ಪ್ರಪಂಚರೂಪದಿಂದ ಬ್ರಹ್ಮದ ಸ್ಥಿತಿಯು ನಿರೂಪಣ**

ಅಸನ್ನೇವ, ಸ, ಭವತಿ | ಅಸತ್ ಬ್ರಹ್ಮೇತಿವೇದಚೇತ್ | ಅಸ್ತಿ ಬ್ರಹ್ಮೇತಿಚೇದ್ವೇದ | ಸಂತಮೇನಂತತೋ ವಿದುರಿತಿ | ತಸ್ಯೈಷ ಏವ ಶಾರೀರ ಆತ್ಮಾಯಃ ಪೂರ್ವಸ್ಯ| ಅಥಾತೋಽನು ಪ್ರಶ್ನಾಃ| ಉತಾವಿದ್ವಾನಮುಂ ಲೋಕಂ ಪ್ರೇತ್ಯಕಶ್ಚನ ಗಚ್ಛತೀ೩ | ಅಹೋ ವಿದ್ವಾನಮುಂಲೋಕಂ ಪ್ರೇತ್ಯಕಶ್ಚಿತ ಸಮ ಶ್ನುತಾ೩ಉ | ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ | ಸತ ಪೋಽತಪ್ಯತ | ಸತಪಸ್ತಪ್ತ್ವಾ ಇದಂ ಸರ್ವಮಸೃಜತ | ಯದಿದಂಕಿಂ ಚ | ತತ್ಸೃಷ್ಟ್ವಾತ ದೇವಾನು ಪ್ರಾವಿಶತ್ | ತದನು ಪ್ರವಿಶ್ಯಸಚ್ಚತ್ಯಚ್ಚಾ ಭವತ್ | ನಿರುಕ್ತಂ ಚಾನಿರುಕ್ತಂ ಚ | ನಿಲಯನಂ ಚಾನಿಲಯನಂ ಚ ವಿಜ್ಞಾನಂ ಚಾ ವಿಜ್ಞಾನಂ ಚ ಸತ್ಯಂ ಚಾ ನೃತಂ ಚ | ಸತ್ಯಮ ಭವತ್ | ಯದಿದಂ ಕಿಂಚ ತತ್ಸತ್ಯಮಿತ್ಯಾ ಚಕ್ಷತೇ | ತದಪ್ಯೇಷ ಶ್ಲೋಕೋ ಭವತಿ || ೧ ||

ಬ್ರಹ್ಮವನ್ನು ಅಸತ್ತಾಗಿ ತಿಳಿಯುವವನು ತಾನೆ ಅಸತ್ತಾಗಿ ಹೋಗುತ್ತಾನೆ. ಬ್ರಹ್ಮವನ್ನು ಸದ್ರೂಪವಾಗಿ ತಿಳಿಯುವ ಧೀರನು (ಬ್ರಹ್ಮವೇತ್ತನು) ಸದ್ರೂಪ ಬ್ರಹ್ಮವೇ ಆಗಿಹೋಗುತ್ತಾನೆ ಎಂದು ಬ್ರಹ್ಮವೇತ್ತರು ತಿಳಿಯುತ್ತಾರೆ. ವಿಜ್ಞಾನಮಯ ಕೋಶದ ಆತ್ಮಾ ಹಿಂದೆ ಯಾರಾಗಿದ್ದನೋ? ಅವನೆ ಆನಂದ ಮಯ ಕೋಶ ಶರೀರದ ಆತ್ಮನು ಆಗಿರುತ್ತಾನೆ. ಆಚಾರ್ಯರಿಂದ ಉಪದೇಶ ವನ್ನು ಪಡೆದನಂತರ ಶಿಷ್ಯನು ಪ್ರಶ್ನೆ ಮಾಡುತ್ತಾನೆ. ಅವಿದ್ವಾನ್ ಪುರುಷನು (ಆತ್ಮನಿಗರಿಯದವನು) ತಾನು ದೇಹ ಬಿಟ್ಟನಂತರ ಪರಮಾತ್ಮನನ್ನು ಪಡೆಯ ಬಲ್ಲನೆ? ಅಥವಾ ವಿದ್ವಾನ್ ಪುರುಷನು ಈ ದೇಹ ಬಿಟ್ಟನಂತರ ಪರಮಾತ್ಮನನ್ನು ಪಡೆಯುವನೆ? ಅಥವಾ ಅವನೂ ಪಡೆಯಲಾರನೆ? (ಈ ಪ್ರಶ್ನೆಗೆ ಬೀಜವನ್ನು

ಈಗ ಆಚಾರ್ಯರು ಹೇಳುತ್ತಾರೆ). ಅವನು (ಬ್ರಹ್ಮನು) ಇಚ್ಛಿಸಿದನು. ನಾನು ಬಹುರೂಪನಾಗಬೇಕು. ಬಹುರೂಪದಿಂದ ಉತ್ಪನ್ನನಾಗಬೇಕು. (ಎಂದು ಇಚ್ಛಿಸಿದನು) ಅವನು (ಬ್ರಹ್ಮ) ತಪಿಸಿದನು. ಅವನು ತಪಿಸಿ ಈ ಸ್ಥಾವರಜಂಗಮಾತ್ಮಕ ಜಗತ್ತನ್ನು ಹುಟ್ಟಿಸಿದನು. ತಾನೇ ಸೃಷ್ಟಿಸಿ ತಾನೇ ಆ ಜಗತ್ತಿನಲ್ಲಿ ಜೀವಾದಿಗಳ ರೂಪದಿಂದ ಪ್ರವೇಶಿಸಿದನು. ಪ್ರವೇಶಿಸಿ ಮೂರ್ತ ಮತ್ತು ಅಮೂರ್ತರೂಪನಾದನು. ನಿಕೃಷ್ಟ ಮತ್ತು ಉತ್ಕೃಷ್ಟ ನಾದನು. ಸವಿಶೇಷ ಮತ್ತು ನಿರ್ವಿಶೇಷನಾದನು. ಆಶ್ರಯ ಮತ್ತು ನಿರಾಶ್ರಯನಾದನು. ಚೇತನ ಮತ್ತು ಅಚೇತನವೂ ಆದನು. ಸತ್‌ರೂಪನು ಅಸತ್‌ರೂಪನು ಆದನು. ಅಂದರೆ ಆತ್ಮನು ಯತಾರ್ಥಸ್ವರೂಪನೇ ಹೌದು. ಆದರೆ ಉಪಾಧಿಯಿಂದ ವ್ಯಾವಹಾರಿಕ ಸತ್ ಆಗಿಯು ತೋರುತ್ತಾನೆ. ಪ್ರಾತಿ ಭಾಸಿಕ ಸತ್ ಆಗಿಯೂ ತೋರುತ್ತಾನೆ. ಆದರೆ ಬ್ರಹ್ಮವೇತ್ತರು, ತೋರುವ ಈ ಎಲ್ಲಾ ಜಗತ್ತನ್ನು ಸತ್ಯಸ್ವರೂಪದಿಂದ ನೋಡುತ್ತಾರೆ, ಸತ್ಯರೂಪದಿಂದ ಕರೆಯುತ್ತಾರೆ. "ಸದಸತ್" ಪ್ರಶ್ನೆಗಳಿಗೆ ಇದು ಉತ್ತರವಾಗಿದೆ. ಈ ವಿಷಯ ದಲ್ಲಿ ಈ ಮಂತ್ರವು ಪ್ರಸಿದ್ಧವಾಗಿದೆ.

## ಏಳನೆ ಅನುವಾಕ

### ಬ್ರಹ್ಮನು ಸುಕೃತಸ್ವರೂಪನು--ಆನಂದಸ್ವರೂಪನು–ಬ್ರಹ್ಮವನ್ನು ಅರಿತವನು-- ನಿರ್ಭಯರೂಪನು

ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಂ ಸ್ವಯಮಕುರುತ । ತಸ್ಮಾತ್ತತ್ಸುಕೃತ ಮುಚ್ಯತ ಇತಿ । ಯದ್ವೈತತ್ಸುಕೃತಂ ರಸೋವೈಸಃ । ರಸಂಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋಹ್ಯೇವಾನ್ಯಾ ತ್ಕಃ ಪ್ರಾಪ್ಯಾದ್ ಯದೇಷ ಆಕಾಶ ಆನಂದೋ ನಸ್ಯಾತ್ । ಏಷ ಹ್ಯೇವಾನಂದ ಯಾತಿ । ಯದಾಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽ ಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂಗತೋ ಭವತಿ । ಯದಾಹ್ಯೇ ವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ವೇವ ಭಯಂ ವಿದುಷೋಮನ್ವಾನಸ್ಯ । ತದಪ್ಯೇಷ ಶ್ಲೋಕೋ ಭವತಿ ॥ ೧ ॥

ಮೊದಲು ಈ ಜಗತ್ತು ಅಸದ್ರೂಪ ಅವ್ಯಾಕೃತವಾಗಿತ್ತು. ಈ ಅವ್ಯಾಕೃತದಿಂದಲೇ ನಾಮರೂಪಾತ್ಮಕ ಮತ್ತು ವ್ಯಾವಹಾರಿಕ ಸತ್ ಜಗತ್ತು ಹುಟ್ಟಿತು. ಈ ಅಸತ್ತು ತನಗೆ ತಾನೇ ಹುಟ್ಟಿಸಿಕೊಂಡಿತು. ಆದಕಾರಣದಿಂದಲೆ ಈ ಅಸತ್ತಿಗೆ ಸುಕೃತ (ತನ್ನ ರಚನೆಗೆ ತಾನೇ ಕಾರಣ) ವೆಂಬ ಹೆಸರು ಹೇಳಲ್ಪಟ್ಟಿರುತ್ತೆ. ಯಾವ ಆ, ಸುಕೃತವೋ ಅದು ರಸ (ಆನಂದ) ವೆಂದು ಪ್ರಸಿದ್ಧಿಹೊಂದಿದೆ. ಈ ರಸವನ್ನು ಪಡೆದ ಪುರುಷನು ಆನಂದೀ (ಆನಂದ ಸ್ವರೂಪ) ಆಗಿ ಹೋಗುತ್ತಾನೆ. ಯಾವಾಗ ಪುರುಷನು ಹೃದಯಾಕಾಶಸ್ಥಿತ ಆನಂದಸ್ವರೂಪ ಆತ್ಮ ಆಗದೆ ಹೋಗಿದ್ದರೆ ಬೇರೆ ಯಾವ ವ್ಯಕ್ತಿ ಅಪಾನಕ್ರಿಯೆ ಮತ್ತು ಪ್ರಾಣಕ್ರಿಯೆಗಳನ್ನುಂಟುಮಾಡುತ್ತಾನೆ? (ಈ ಆತ್ಮನ ಆನಂದವನ್ನುಂಟುಮಾಡುತ್ತಾನೆ). ಯಾವಾಗ ಸಾಧಕನು ಈ, ಅದೃಶ್ಯನು (ಕಣ್ಣಿಗೆ ಕಾಣದವನು) ಅನಿರ್ವಾಚ್ಯನು (ಹೇಳಲಾಗದವನು) ನಿರಾಧಾರನು ಆದ ಬ್ರಹ್ಮನಲ್ಲಿ ಅಭಯಸ್ಥಿತಿಯನ್ನು ಪಡೆಯುತ್ತಾನೊ, ಆವಾಗ ಅಭಯತ್ವವನ್ನೇ ಹೊಂದುತ್ತಾನೆ. ಅಂದರೆ ಅಭಯ ಸ್ವರೂಪವೇ ಆಗಿ ಹೋಗುತ್ತಾನೆ. ಯಾವಾಗ ರಸರೂಪಾತ್ಮಕ ಆತ್ಮನಿಗೂ ಬ್ರಹ್ಮನಿಗೂ ಸ್ವಲ್ಪವಾದರೂ ಭೇದವನ್ನೆಣಿಸುತ್ತಾನೋ ಆವಾಗ ಅವನಿಗೆ ಭಯಪ್ರಾಪ್ತಿಯಾಗುತ್ತೆ. ಬ್ರಹ್ಮಾತ್ಮರ ಅಭೇದವನ್ನೊಪ್ಪದ ವಿದ್ಯಾಭಿಮಾನಿಗೆ ಆ, ಬ್ರಹ್ಮವೆ ಭಯರೂಪನಾಗುತ್ತಾನೆ. ಈ ವಿಷಯದಲ್ಲಿ ಈ ಶ್ಲೋಕ ಪ್ರಸಿದ್ಧವಾಗಿದೆ.

## ಎಂಟನೆ ಅನುವಾಕ

### ನಿರತಿಶಯ ಬ್ರಹ್ಮಾನಂದದ ವಿಮರ್ಶೆ

ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭಿಷಾಸ್ಮಾದಗ್ನಿಶ್ಚೇನ್ದ್ರಶ್ಚ । ಮೃತ್ಯುರ್ಧಾವತಿಪಞ್ಚಮ ಇತಿ । ಸೈಷಾನಂದಸ್ಯಮೀಮಾಂಸಾ ಭವತಿ । ಯುವಾಸ್ಯಾತ್ಸಾಧುಯುವಾಧ್ಯಾಯಕ ಆಶಿಷ್ಠೋ ದೃಢಿಷ್ಠೋಬಲಿಷ್ಠ ಸ್ತಸ್ಯೇಯಂ ಪೃಥಿವೀ ಸರ್ವಾವಿತ್ತಸ್ಯ ಪೂರ್ಣಾಸ್ಯಾತ್ । ಸ ಏಕೋ ಮಾನುಷ ಆನಂದಃ ತೇಯೇ ಶತಂ ಮಾನುಷಾ ಆನಂದಾಃ ॥ ೧ ॥

ಆನಂದರೂಪ ಆತ್ಮನ ಭಯದಿಂದ ವಾಯುವು ಚಲಿಸುತ್ತೆ. ಆತ್ಮನ ಭಯದಿಂದ ಸೂರ್ಯನು ಉದಯಿಸುತ್ತಾನೆ. ಆತ್ಮನ ಭಯದಿಂದ ಅಗ್ನಿ ಮತ್ತು ಇಂದ್ರ ಮತ್ತು ಐದನೆಯವನಾದ ಮೃತ್ಯುವು ಓಡುತ್ತಾನೆ. ಈಗ ಈ ಬ್ರಹ್ಮಾನಂದದ ವಿಚಾರವು ಆಗುತ್ತೆ. ಸಾಧು ಸ್ವಭಾವದವನು, ನವ ಯುವಕನು, ವೇದಪಾಠಿಯು, ನಿರಾಶನಾಗದವನು, ಅತ್ಯಂತ ದೃಢಕಾಯನು, ದಷ್ಟಪುಷ್ಟನು, ಬಲಿಷ್ಠನು. ಧನಧಾನ್ಯಾದಿ ಸಂಪತ್ತುಳ್ಳ ಪೃಥಿವಿಪಾಲನ ಆನಂದವು ನೂರು ಸಾಮಾನ್ಯ ಮಾನವರ ಆನಂದಕ್ಕಿಂತಲೂ ಹೆಚ್ಚಿನದು ಎಂದು ತಿಳಿಯಬೇಕು. ಮತ್ತು ಅದಕ್ಕೆ ಮಾನುಷಾನಂದವೆಂದು ಶಾಸ್ತ್ರದಲ್ಲಿ ನಿರ್ಣಯಿಸಿರುತ್ತಾರೆ.

ಸ ಏಕೋ ಮನುಷ್ಯಗಂನ್ಧರ್ವಾಣಾಮಾನಂದಃ | ಶ್ರೋತ್ರಿಯಸ್ಯ ಚಾಕಾಮುಹತಸ್ಯ | ತೇಯೇಶತಂ ಮನುಷ್ಯಗಂಧರ್ವಾಣಾಮಾನನ್ದಾಃ | ಸ ಏಕೋ ದೇವಗಂಧರ್ವಾಣಾ ಮಾನಂದಃ ಶ್ರೋತ್ರಿಯಸ್ಯ ಚಾಕಾಮುಹತಸ್ಯ | ತೇಯೇ ಶತಂದೇವಗಂಧರ್ವಾಣಾಮಾನಂದಾಃ | ಸ ಏಕಃ ಪಿತೃಣಾಂಚಿರಲೋಕ ಲೋಕಾನಾಮಾನಂದಃ | ಶ್ರೋತ್ರಿಯಸ್ಯ ಚಾಕಾಮುಹತಸ್ಯ ತೇಯೇಶತಂ ಪಿತೃಣಾಂ ಚಿರಲೋಕಾಲೋಕಾನಾಮಾನಂದಾಃ | ಸ ಏಕಃ ಆಜಾನಜಾನಾಂ ದೇವಾನಾಮಾನಂದಃ || ೨ ||

ನೂರು ಮಾನವಾನಂದಕ್ಕಿಂತಲೂ ಒಬ್ಬ **ಮನುಷ್ಯ ಗಂಧರ್ವನ ಆನಂದವು** ಹೆಚ್ಚಿನದು. ನೂರು ಮನುಷ್ಯ ಗಂಧರ್ವರಾನಂದಕ್ಕಿಂತಲೂ ಒಬ್ಬ **ದೇವಗಂಧರ್ವನ ಆನಂದವು** ಹೆಚ್ಚಿನದು. ನೂರು ದೇವ ಗಂಧರ್ವರ ಆನಂದಕ್ಕಿಂತಲೂ ಒಬ್ಬ **ಪಿತೃದೇವತೆಯ ಆನಂದವು** ಹೆಚ್ಚಿನದು. ಪೂರ್ವೋಕ್ತ ನೂರು ಪಿತೃದೇವತೆಗಳ ಆನಂದಕ್ಕಿಂತಲೂ **ಆಜಾನಜಾ ದೇವತೆಯ** ಒಂದು ಆನಂದವು ಹೆಚ್ಚಿನದು. ಶ್ರೋತ್ರೀಯನಾಗಿಯೂ ಹತಕಾಮನಾಗಿಯೂ ಇರುವವನಿಗೂ ಪೂರ್ವೋಕ್ತ ಆನಂದವೆಲ್ಲ ಲಭಿಸುತ್ತೆ.

ಶ್ರೋತ್ರಿಯಸ್ಯ ಚಾಕಾಮುಹತಸ್ಯ । ತೇಯೇ ಶತಮಾಜಾನ ಜಾನಾಂ ದೇವಾನಾಮಾನನ್ದಾಃ। ಸ ಏಕಃ **ಕರ್ಮದೇವಾನಾಂದೇ**ವಾನಾಮಾನನ್ದಃ। ಯೇ ಕರ್ಮಣಾದೇವಾನಪಿಯನ್ತಿ । ಶ್ರೋತ್ರಿಯಸ್ಯ ಚಾಕಾಮುಹತಸ್ಯ । ತೇಯೇ ಶತಂ ಕರ್ಮ **ದೇವಾನಾಂ ದೇವಾನಾಮಾನನ್ದಾಃ । ಸ ಏಕೋ ದೇವಾನಾಮಾನನ್ದಃ** । ಶ್ರೋತ್ರಿಯಸ್ಯ ಚಾಕಾಮುಹತಸ್ಯ । ತೇಯೇ ಶತಂ ದೇವಾನಾಮಾನ್ದಾಃ **ಸ ಏಕಃ ಇನ್ದ್ರಸ್ಯಾನನ್ದಃ** ॥ ೩ ॥

ನೂರು ಆಜಾನಜಾ ದೇವತೆಯ ಆನಂದಕ್ಕಿಂತಲೂ ಹೆಚ್ಚಿನದು ಒಬ್ಬ ಕರ್ಮದೇವತೆಯ ಆನಂದವಾಗಿದೆ. ನೂರು ಕರ್ಮದೇವತೆಗಳ ಆನಂದಕ್ಕಿಂತಲೂ ಹೆಚ್ಚಿನದು ಒಂದು ದೇವಾನಂದವಾಗಿದೆ. ನೂರು ದೇವಾನಂದಕ್ಕಿಂತಲೂ ಒಬ್ಬ ಇಂದ್ರನ ಆನಂದವು ಹೆಚ್ಚಿನದಾಗಿರುತ್ತೆ. ಶ್ರೋತ್ರಿಯನಾಗಿಯೂ, ಹತಕಾಮು ನಾಗಿಯೂ ಇರುವವನಿಗೂ ಪೂರ್ವೋಕ್ತ ಆನಂದವೆಲ್ಲ ಲಭಿಸುತ್ತೆ.

ಶ್ರೋತ್ರಿಯಸ್ಯ ಚಾಕಾಮುಹತಸ್ಯ । ತೇಯೇ ಶತಮಿನ್ದ್ರಸ್ಯಾನನ್ದಾಃ । ಸ ಏಕೋ ಬೃಹಸ್ಪತೇರಾನನ್ದಃ ಶ್ರೋತ್ರಿಯಸ್ಯ ಚಾಕಾ ಮುಹತಸ್ಯ । ತೇಯೇ ಶತಂ ಬೃಹಸ್ಪತೇರಾನನ್ದಾಃ । ಸ ಏಕಃ ಪ್ರಜಾಪತೇರಾನನ್ದಃ ಶ್ರೋತ್ರಿಯಸ್ಯ ಚಾಕಾ ಮುಹತಸ್ಯ । ತೇಯೇ ಶತಂ ಪ್ರಜಾಪತೇರಾನನ್ದಾಃ । ಸ ಏಕೋ ಬ್ರಹ್ಮಣಃ ಆನನ್ದಃ ಶ್ರೋತ್ರಿಯಸ್ಯ ಚಾಕಾಮುಹತಸ್ಯ ॥ ೪ ॥

ನೂರು ಜನ ಇಂದ್ರರ ಆನಂದಕ್ಕಿಂತಲೂ ಒಬ್ಬ ಬೃಹಸ್ಪತಿಯ ಆನಂದವು ಹೆಚ್ಚಿನದು. ನೂರು ಜನ ಬೃಹಸ್ಪತಿಗಳ ಆನಂದಕ್ಕಿಂತಲೂ ಓರ್ವ ಪ್ರಜಾಪತಿಯ ಆನಂದವು ಹೆಚ್ಚಿನದು. ನೂರು ಜನ ಪ್ರಜಾಪತಿ ಗಳ ಆನಂದಕ್ಕಿಂತಲೂ ಬ್ರಹ್ಮಾನಂದವು ಹೆಚ್ಚಿನದೆಂದು ತಿಳಿಯಬೇಕು. (ಶ್ರೋತ್ರಿಯನಾಗಿಯೂ, ಹತಕಾಮುನಾಗಿಯೂ ಇರುವವನಿಗೂ ಪೂರ್ವೋಕ್ತ ಆನಂದವೆಲ್ಲವು ಲಭಿಸುತ್ತೆ.)

### ಬ್ರಹ್ಮಾತ್ಮೈಕ್ಯ ದೃಷ್ಟಿಯ ಉಪಸಂಹಾರ

ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ । ಸಯ ಏವಂ

ವಿದಸ್ಮಾಲ್ಲೋಕಾತ್ಪ್ರೇತ್ಯ | ಏತಮನ್ನಮಯಮಾತ್ಮಾನಮುಪಸಂಕ್ರಾಮತಿ | ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ | ಏತಂ ಮನೋಮಯ ಮಾತ್ಮಾನಮುಪಸಂಕ್ರಾಮತಿ | ಏತಂ ವಿಜ್ಞಾನಮಯಮಾತ್ಮಾನಮುಪ ಸಂಕ್ರಾಮತಿ | ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ | ತದಪ್ಯೇಷ ಶ್ಲೋಕೋ ಭವತಿ || ೫ ||

ಪಂಚಕೋಶಗಳ ಒಳಗಿರುವ ಯಾವ ಆತ್ಮನಿರುವನೋ ಅವನೇ ಆದಿತ್ಯಾಂತರ್ಗತನಾಗಿರುವನು. ಅಂದರೆ ಈ ಪಂಚಕೋಶಗಳಲ್ಲೂ ಸೂರ್ಯ ನಲ್ಲೂ ಒಬ್ಬ ಆತ್ಮನೆ ಇರುವನು. ಹೀಗೆ ಯಾವ ತತ್ವವೇತ್ತನು ತಿಳಿಯುವನೋ ಅವನು ಈ ದೃಶ್ಯಾದೃಶ್ಯಸಮೂಹರೂಪಲೋಕದಿಂದ ಬಿಡುಗಡೆಯಾಗು ತ್ತಾನೆ. ಅನಂತರ ಅನ್ನಮಯ ಕೋಶವನ್ನು ಪಡೆಯುತ್ತಾನೆ. ಅನಂತರ ಅನ್ನ ಮಯವನ್ನು ಬಿಡುತ್ತಾನೆ. ಪ್ರಾಣಮಯವನ್ನು ಪಡೆಯುತ್ತಾನೆ. ಪುನಃ ಪ್ರಾಣಮಯವನ್ನು ಬಿಟ್ಟು ಮನೋಮಯವನ್ನು ಪಡೆಯುತ್ತಾನೆ. ಮನೋ ಮಯವನ್ನು ಬಿಟ್ಟು ವಿಜ್ಞಾನಮಯವನ್ನು ಪಡೆಯುತ್ತಾನೆ. ವಿಜ್ಞಾನಮಯ ವನ್ನು ಬಿಟ್ಟು ಆನಂದಮಯವನ್ನು ಪಡೆಯುತ್ತಾನೆ. ಅಂದರೆ (ಸಾಧಕನು) ಕ್ರಮವಾಗಿ ಪಂಚಕೋಶಗಳನ್ನು ಬಿಟ್ಟು ಬೇರೆಯಾಗುತ್ತಾನೆ. ಪಂಚಕೋಶಾ ತೀತನಾಗುತ್ತಾನೆ. ನಿರ್ವಿಕಾರ ರೂಪನಾಗುತ್ತಾನೆ. ಪರಮಾನಂದ ಸ್ವರೂಪ ನಾಗುತ್ತಾನೆ. ಪರಬ್ರಹ್ಮವೇ ಆಗುತ್ತಾನೆ. ಆ ವಿಷಯದಲ್ಲಿ ಈ ಶ್ಲೋಕವು ಹೇಳಲ್ಪಟ್ಟಿದೆ.

## ಒಂಬತ್ತನೆ ಅನುವಾಕ

### ಬ್ರಹ್ಮಾನಂದಾನುಭವಿಯ ಅಭಯಸ್ಥಿತಿಯ ವರ್ಣನೆ

ಯತೋ ವಾಚೋ ನಿವರ್ತನ್ತೇ | ಅಪ್ರಾಪ್ಯ ಮನಸಾಸಹ | ಆನನ್ದಂ ಬ್ರಹ್ಮಣೋ ವಿದ್ವಾನ್, ನಬಿಭೇತಿ ಕುತಶ್ಚನೇತಿ | ಏತಂ ಹವಾವನತಪತಿ |

ಕಿ ಮಹಂ ಸಾಧುನಾಕರವಮ್ । ಕಿ ಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನಂ ಸ್ಪೃಣುತೇ । ಉಭೇ ಹ್ಯೇ ವೈಷ ಏತೇ ಆತ್ಮಾನಂ ಸ್ಪೃಣುತೇ । ಯ ಏವಂ ವೇದ । ಇತ್ಯುಪನಿಷತ್ ॥ ೧ ॥

ಮನಸಹಿತವಾಗಾದಿ ಇಂದ್ರಿಯಗಳು ಆತ್ಮನನ್ನು ಪಡೆಯದೆ ಹಿಂತಿರುಗುತ್ತೆ. ಬ್ರಹ್ಮಾನಂದವನ್ನು ಅನುಭವಿಸಿದ ವಿದ್ವಾನ್ ಪುರುಷನು ಯಾರಿಂದಲೂ ಹೆದರುವುದಿಲ್ಲ. ದೃಶ್ಯವಾದೀ ಜಗತ್ತಿನ ಭಯವು ದ್ರಷ್ಟರೂಪಾತ್ಮನಿಗಿರುವುದಿಲ್ಲ. ಅಥವಾ ಅಧ್ಯಸ್ಥವಾದ ಈ ಜಗತ್ತಿನ ಭಯ ಆಧಾರಕ್ಕೆ ಎಂದೆಂದಿಗೂ ಇರುವುದಿಲ್ಲ. ಆ ವಿದ್ವಾನ್ ಪುರುಷನು ನಾನು ಪುಣ್ಯಕಾರ್ಯ ಮಾಡಲಿಲ್ಲವಲ್ಲವೆಂದು ತಪಿಸುವುದಿಲ್ಲ (ಮನಸ್ಸಿನಲ್ಲಿ ಸಂತಾಪ ಪಡುವುದಿಲ್ಲ). ಮತ್ತು ಪಾಪ ಮಾಡಿದೆನೆಂದು ಭಯದಿಂದ ಪರಿತಾಪ ಗೊಳ್ಳುವುದಿಲ್ಲ. ಆ ಯಾವ ವಿದ್ವಾನ್ ಪುರುಷನಿಗೆ ಪೂರ್ವೋಕ್ತ ಪಾಪಪುಣ್ಯ ಗಳೆರಡು ಅಂಟುವುದಿಲ್ಲ. ಏಕೆಂದರೆ ಆ ಜ್ಞಾನಿಯು ಆ ಪುಣ್ಯಪಾಪಗಳೆರಡನ್ನು ತನ್ನ ಆತ್ಮರೂಪದಿಂದಲೇ ನೋಡುತ್ತಾನೆ. ಆಗ ಅವೆರಡು ಫಲಶಕ್ತಿರಹಿತ ವಾಗುತ್ತವೆ (ಶೂನ್ಯವಾಗುತ್ತವೆ ಮುಂದಿನ ಜನ್ಮಕ್ಕೆ ಕಾರಣವಾಗುವುದಿಲ್ಲ). ಯಾವ ಸಾಧಕನು ಈ ರೀತಿಯಾಗಿ ತಿಳಿಯುತ್ತಾನೋ ಅವನ ವಿಷಯದಲ್ಲಿ ಈ ಬ್ರಹ್ಮವಿದ್ಯಾರೂಪ ಉಪನಿಷತ್ತು ಉಪಯುಕ್ತವಾಗಿದೆ.

# ಭೃಗುವಲ್ಲೀ

## ಒಂದನೆ ಅನುವಾಕ

### ಭೃಗು ಮತ್ತು ವರುಣನ ಪ್ರಶ್ನೋತ್ತರಗಳು

ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ಪ್ರೋವಾಚ ಅನ್ನಂ, ಪ್ರಾಣಂ, ಚಕ್ಷುಃ, ಶ್ರೋತ್ರಂ, ಮನೋ, ವಾಚಮಿತಿ । ತಂ ಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯನ್ತೇ ಯೇನ ಜಾತಾನಿ ಜೀವನ್ತಿ । ಯತ್ಪ್ರಯನ್ತ್ಯ ಭಿ ಸಂವಿಶನ್ತಿ ।ತದ್ವಿಜಿಜ್ಞಾಸಸ್ವ । ತದ್ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪ ಸ್ತಪ್ತ್ವಾ ॥ ೧ ॥

ವರುಣನಿಗೆ ಸುಪ್ರಸಿದ್ಧಶಾಲಿಯಾದ ಭೃಗು ಎಂಬೊರ್ವ ಮಗನಿದ್ದನು. ಭೃಗುವು ತತ್ವಜಿಜ್ಞಾಸು ಆಗಿದ್ದನು. ಒಂದು ದಿವಸ ಭೃಗುವು ತಂದೆಯು ಸಮೀಪಕ್ಕೆ ವಿಧಿವತ್ತಾಗಿ ಹೋದನು. ಭಗರ್ವ! ನನಗೆ ಬ್ರಹ್ಮೋಪದೇಶ ಮಾಡಿ ಎಂದು ಕೇಳಿಕೊಂಡನು. ಆಗ ವರುಣನು ಹೇಳುತ್ತಾನೆ. ಅನ್ನ, ಪ್ರಾಣ, ಕಣ್ಣು, ಕಿವಿ ಮತ್ತು ವಾಣಿ ಇವು ಇಷ್ಟು ಬ್ರಹ್ಮವನ್ನು ಪ್ರಾಪ್ತಿಗೊಳಿಸುವ ದ್ವಾರ (ಬಾಗಿಲುಗಳು) ಗಳು ಎಂದು ತಿಳಿ. ಮತ್ತು ಕೇಳು, ಯಾವುದರಿಂದ ಈ ಪಂಚಭೂತಗಳು ಹುಟ್ಟುತ್ತೋ, ನಂತರ ಯಾರ ಆಶ್ರಯದಲ್ಲಿ ಜೀವಿಸುವವೋ, ಕಡೆಯಲ್ಲಿ ವಿನಾಶೋನ್ಮುಖದ್ವಾರ (ವಿನಾಶವಾಗಿ) ಯಾವುದರಲ್ಲಿ ಅಡಗಿ ಹೋಗುವವೋ, ಅದನ್ನು ವಿಶೇಷರೂಪದಿಂದ ತಿಳಿಯಲಿಚ್ಛಿಸು. ಅದು ಬ್ರಹ್ಮವಾಗಿದೆ. ಆಗ ಭೃಗುವು ತಪಿಸಿದನು (ಯೋಚಿಸಿದನು). ಯೋಚಿಸಿದನಂತರ.

## ಎರಡನೆ ಅನುವಾಕ

### ಅನ್ನವೇ ಬ್ರಹ್ಮವಾಗಿದೆ ಅನ್ನುವ ವಿಚಾರ

ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ। ಅನ್ನೇನ ಜಾತಾನಿ ಜೀವನ್ತಿ ಅನ್ನಂ ಪ್ರಯನ್ತ್ಯಭಿಸಂವಿಶನ್ತೀತಿ। ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ । ಅಧೀಹಿಭಗವೋ ಬ್ರಹ್ಮೇತಿ । ತಂ ಹೋವಾಚ । ತಪಸಾ ಬ್ರಹ್ಮವಿಜಿಜ್ಞಾಸಸ್ವ । ತಪೋಬ್ರಹ್ಮೇತಿ ಸ ತಪೋಽತಪ್ಯತ ಸ ತಪಸ್ತಪ್ತ್ವಾ ॥ ೧ ॥

ಭೃಗುವು ಅನ್ನವೇ ಬ್ರಹ್ಮವೆಂದು ತಿಳಿದನು. ಏಕೆಂದರೆ, ಅನ್ನದಿಂದಲೆ ಎಲ್ಲಾ ಪ್ರಾಣಿಗಳು ಹುಟ್ಟುತ್ತವೆ. ಮತ್ತು ಅನ್ನದಿಂದಲೇ ಜೀವಿಸುತ್ತವೆ. ಕಡೆಯಲ್ಲಿ ಅನ್ನದಲ್ಲೆ ಅಡಗುತ್ತವೆ. ಹೀಗೆ ಅರಿತ ಅನಂತರ ಪುನಃ ಸಂಶಯದಿಂದ ತಂದೆಯ ಹತ್ತಿರ ಹೋದನು. ಭಗವನ್! ನನಗೆ ಬ್ರಹ್ಮೋಪದೇಶ ಮಾಡಿ ಎಂದು ಕೇಳಿದನು. ಆಗ ವರುಣನು ಹೇಳಿದನು. ತಪಸ್ಸಿನ ದ್ವಾರ ಬ್ರಹ್ಮವನ್ನು ತಿಳಿಯಲು ಪ್ರಯತ್ನಿಸು. ತಪವೇ ಬ್ರಹ್ಮವಾಗಿದೆ (ಮನಇಂದ್ರಿಯಗಳ ಏಕಾಗ್ರತೆಯು ತಪಸ್ಸು. ಇದು ಬ್ರಹ್ಮಜ್ಞಾನಕ್ಕೆ ಸಾಧನವಾಗಿರುತ್ತಾ

ದುದರಿಂದ ತಪಸ್ಸನ್ನು ಬ್ರಹ್ಮವೆಂದು ಉಪಚಾರಾರ್ಥವಾಗಿ ಹೇಳಿರುತ್ತದೆ). ಆಗ ಭೃಗುವು ತಪಿಸಿದನು. ಅನಂತರ ಹೀಗೆ ತಿಳಿದನು.

## ಮೂರನೆ ಅನುವಾಕ

### ಪ್ರಾಣವೇ ಬ್ರಹ್ಮ ಎನ್ನುವುದರ ವಿಚಾರ

ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ | ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ | ಪ್ರಾಣೇನ ಜಾತಾನಿ ಜೀವನ್ತಿ | ಪ್ರಾಣಂ ಪ್ರಯನ್ತ್ಯಭಿ ಸಂವಿಶನ್ತೀತಿ | ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪ ಸಸಾರ | ಅಧೀಹಿ ಭಗವೋ ಬ್ರಹ್ಮೇತಿ | ತಂಹೋವಾಚ | ತಪಸಾ ಬ್ರಹ್ಮ ವಿಜಿಜ್ಞಾಸಸ್ವ | ತಪೋ ಬ್ರಹ್ಮೇತಿ | ಸಪೋऽತಪ್ಯತ | ಸತಪಸ್ತಪ್ತ್ವಾ || ೧ ||

ಭೃಗುವು ಪ್ರಾಣವೇ ಬ್ರಹ್ಮವಾಗಿದೆ ಎಂದು ತಿಳಿದನು. ಏಕೆಂದರೆ, ಪ್ರಾಣದಿಂದಲೆ ಪ್ರಾಣಿಗಳ ಉತ್ಪತ್ತಿ ಪ್ರಾಣಾಧಾರದಲ್ಲೆ ಸ್ಥಿತಿ ಕಡೆಯಲ್ಲಿ ಪ್ರಾಣ ದಲ್ಲೇ ವಿಲೀನವಾಗುತ್ತವೆ. ಭೃಗುವು ಹೀಗೆ ನಿಶ್ಚಯಿಸಿದನಂತರ ಪುನಃ ಅವನು ಸಂಶಯಗ್ರಸ್ತನಾದನು. ತಂದೆಯ ಸಮೀಪಕ್ಕೆ ಹೋದನು. ಭಗವ‌ನ್! ನನಗೆ ಬ್ರಹ್ಮೋಪದೇಶ ಮಾಡಿ ಎಂದನು. ಆಗ ವರುಣನು ಹೇಳಿದನು. ನೀನು ತಪಸ್ಸಿನ ದ್ವಾರಬ್ರಹ್ಮವನ್ನು ತಿಳಿಯಲು ಇಚ್ಛಿಸು. ತಪವೇ ಬ್ರಹ್ಮ ವಾಗಿದೆ. ಆಗ ಭೃಗುವು ತಪಸ್ಸುಮಾಡಿದನು. ನಂತರ ಹೀಗೆ ತಿಳಿದನು.

## ನಾಲ್ಕನೆ ಅನುವಾಕ

### ಮನವೇ ಬ್ರಹ್ಮ ಎನ್ನುವುದರ ವಿಚಾರ

ಮನೋಬ್ರಹ್ಮೇತಿ ವ್ಯಜಾನಾತ್ | ಮನಸೋಹ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ | ಮನಸಾಜಾತಾನಿ ಜೀವನ್ತಿ | ಮನಃ ಪ್ರಯನ್ತ್ಯಭಿಸಂ ವಿಶನ್ತೀತಿ | ತದ್ವಿಜ್ಞಾಯ ಪುನರೇವವರುಣಂ ಪಿತರಮುಪಸಸಾರ | ಅಧೀಹಿ ಭಗವೋಬ್ರಹ್ಮೇತಿ | ತಂಹೋವಾಚ | ತಪಸಾ ಬ್ರಹ್ಮವಿಜಿಜ್ಞಾಸಸ್ವ | ತಪೋ ಬ್ರಹ್ಮೇತಿ | ಸತಪೋऽತಪ್ಯತ | ಸತಪಸ್ತಪ್ತ್ವಾ || ೧ ||

ಭೃಗುವು ಮನಸ್ಸೇ ಬ್ರಹ್ಮವೆಂದು ತಿಳಿದನು. ಏಕೆಂದರೆ, ಮನದಿಂದಲೇ ಭೂತಗಳ ಉತ್ಪತ್ತಿಯಾಗುತ್ತೆ. ಮನದ ದ್ವಾರವೆ ಜೀವಿಸುತ್ತವೆ. ಮನದಲ್ಲೆ ಕಡೆಯಲ್ಲಿ ಲೀನವಾಗಿ ಹೋಗುತ್ತವೆ. ಎಂದರಿತನಂತರ ಭೃಗುವಿಗೆ ಪುನಃ ಸಂಶಯವು ಬಂದಿತು. ಆಗ ಭೃಗುವು ಪುನಃ ತಂದೆಯಾದ ವರುಣನ ಹತ್ತಿರ ಹೋದನು. ಭಗವನ್! ನನಗೆ ಬ್ರಹ್ಮೋಪದೇಶ ಮಾಡಿ ಎಂದನು. ಆಗ ವರುಣನು ಹೇಳಿದನು. ಮಗುವೆ! ತಪಸ್ಸಿನ ದ್ವಾರಬ್ರಹ್ಮವನ್ನು ತಿಳಿಯ ಲಿಚ್ಛಿಸು. ಏಕೆಂದರೆ ತಪವೇ ಬ್ರಹ್ಮವಾಗಿದೆ. ಆಗ ಭೃಗುವು ತಪಿಸಿದನು. ಅನಂತರ ಹೀಗೆ ನಿಶ್ಚಯಿಸಿದನು.

## ಐದನೆ ಅನುವಾಕ

### ವಿಜ್ಞಾನವೆ ಬ್ರಹ್ಮ ಎನ್ನುವುದರ ವಿಚಾರ

ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ। ವಿಜ್ಞಾನೇನ ಜಾತಾನಿ ಜೀವನ್ತಿ। ವಿಜ್ಞಾನಂ ಪ್ರಯನ್ತ್ಯಭಿಸಂ ವಿಶನ್ತೀತಿ ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪ ಸಸಾರ ಅಧೀಹಿ ಭಗವೋ ಬ್ರಹ್ಮೇತಿ । ತಂಹೋವಾ ಚ ತಪಸಾ ಬ್ರಹ್ಮವಿ ಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸತಪೋಽತಪ್ಯತ । ಸತಪಸ್ತಪ್ತ್ವಾ ॥ ೧ ॥

ಭೃಗುವು ವಿಜ್ಞಾನ (ಬುದ್ಧಿ) ವೆ ಬ್ರಹ್ಮವೆಂದರಿತನು. ಏಕೆಂದರೆ, ವಿಜ್ಞಾನದಿಂದಲೆ ಎಲ್ಲಾ ಜೀವರ ಉತ್ಪತ್ತಿಯಾಗುತ್ತೆ. ವಿಜ್ಞಾನದಿಂದಲೇ ಜೀವಿಸುತ್ತೆ. ಕಡೆಯಲ್ಲಿ ವಿಜ್ಞಾನದಲ್ಲೇ ಅಡಗಿಹೋಗುತ್ತವೆ. ಹೀಗೆಂದರಿತ ನಂತರ ಭೃಗುವಿಗೆ ಪುನಃ ಸಂಶಯವು ಬಂದಿತು. ಅಗ ಭೃಗುವು ಪುನಃ ತಂದೆಯ (ವರುಣ) ಹತ್ತಿರ ಹೋದನು. ಭಗವನ್! ನನಗೆ ಬ್ರಹ್ಮೋಪದೇಶ ಮಾಡಿ ಎಂದನು. ಆಗ ವರುಣನು ಹೇಳಿದನು. ನೀನು ತಪಸ್ಸಿನ ದ್ವಾರ ಬ್ರಹ್ಮವನ್ನು ತಿಳಿಯಲು ಇಚ್ಛಿಸು. ಏಕೆಂದರೆ! ತಪಸ್ಸೆ ಬ್ರಹ್ಮವಾಗಿದೆ. ಆಗ ಭೃಗುವು ತಪಸ್ಸನ್ನು ಮಾಡಿದನು. ಮಾಡಿದನಂತರ ಹೀಗೆ ನಿಶ್ಚಯಿಸಿದನು.

## ಆರನೆ ಅನುವಾಕ

### ಆನಂದವೆ ಬ್ರಹ್ಮವಾಗಿದೆ ಎನ್ನುವುದರ ವಿಚಾರ ಮತ್ತು ಫಲ

ಆನನ್ದೋ ಬ್ರಹ್ಮೇತಿ ವಿಜಾನಾತ್ | ಆನನ್ದಾದ್ಧ್ಯೇವ ಖಲ್ವಿಮಾನಿಭೂತಾನಿ ಜಾಯನ್ತೇ | ಆನನ್ದೇನ ಜಾತಾನಿ ಜೀವನ್ತಿ | ಆನನ್ದಂ ಪ್ರಯನ್ತ್ಯಭಿ ಸಂವಿಶನ್ತೀತಿ ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇವ್ಯೋಮನ್ ಪ್ರತಿಷ್ಠಿತಾ | ಸ ಯ ಏವಂ ವೇದ ಪ್ರತಿತಿಷ್ಠತಿ | ಅನ್ನವಾನನ್ನಾದೋ ಭವತಿ | ಮಹಾನ್ ಭವತಿ | ಪ್ರಜಯಾ ಪಶುಭಿರ್ಬ್ರಹ್ಮ ವರ್ಚಸೇನ | ಮಹಾನ್ ಕೀರ್ತ್ಯಾ || ೧ ||

ಭೃಗುವು ಆನಂದವೇ ಬ್ರಹ್ಮವೆಂದು ತಿಳಿದನು. ಏಕೆಂದರೆ! ಆನಂದದಿಂದಲೆ ಎಲ್ಲಾ ಜೀವರಾಶಿಗಳ ಉತ್ಪತ್ತಿಯಾಗುತ್ತೆ. ಆನಂದದಲ್ಲೆ ಸ್ಥಿತಿಉಳ್ಳದ್ದಾಗುತ್ತೆ. ಕಡೆಯಲ್ಲಿ ಆನಂದದಲ್ಲೆ ಲಯವಾಗುತ್ತವೆ ಎಂದು ನಿಶ್ಚಯಿಸಿದನು. ಇದಕ್ಕೆ ಭಾರ್ಗವೀವಾರುಣಿ ವಿದ್ಯಾ ಎಂದು ಹೆಸರು. ಏಕೆಂದರೆ! ಭೃಗುವಿನಿಂದ ತಿಳಿಯಲ್ಪಟ್ಟಿರುತ್ತೆ. ವರುಣನಿಂದ ಬ್ರಹ್ಮವಿದ್ಯ ಉಪದೇಶಿಸಲ್ಪಟ್ಟಿರುತ್ತೆ. ಇದು ಪರಮಾಕಾಶದಲ್ಲಿ ಸ್ಥಿತವಾಗಿದೆ. ಅಂದರೆ ಆನಂದಮಯ ಹೃದಯದೊಳು ಬಚ್ಚಿಡಲು ಯೋಗ್ಯವಾಗಿದೆ. ಪರಮ ರಹಸ್ಯವಾಗಿದೆ. ಶ್ರೇಷ್ಠತಮವಾಗಿದೆ. ರಸಾತ್ಮಕವಾಗಿದೆ. ಇದನ್ನು ಯಾರು ತಿಳಿಯುತ್ತಾನೋ ಅವನು ಆನಂದಮಯ ಬ್ರಹ್ಮ ಆಗಿಹೋಗುತ್ತಾನೆ. ಅವನು ಅಂತ್ಯದವರಿವಿಗೂ ಅನ್ನವುಳ್ಳವನಾಗುತ್ತಾನೆ. ಅನ್ನಭೋಕ್ತನಾಗುತ್ತಾನೆ. ಅವನು ಮಹಾನ್ ಆಗುತ್ತಾನೆ. ಅಂದರೆ ಅನೇಕ ಮಕ್ಕಳುಳ್ಳವನಾಗುತ್ತಾನೆ. ಅನೇಕ ಪಶುಗಳು ಉಳ್ಳವನಾಗುತ್ತಾನೆ. ಅನೇಕ ಆನೆಗಳು ಕುದುರೆಗಳುಳ್ಳವನಾಗುತ್ತಾನೆ. ಶಮಾದಮಾನ್ವಿತನಾದ ಈ ಮಹಾಪುರುಷನು ಮಹಾ ತೇಜಸ್ವಿಯಾಗುತ್ತಾನೆ. ಅನಂತಾನಂತ ಶುಭಾಚರಣೆಗಳುಳ್ಳವನಾಗುತ್ತಾನೆ. ತದ್ವಾರ ಕೀರ್ತಿಶಾಲಿಯಾಗುತ್ತಾನೆ. ಖ್ಯಾತಿವಂತನಾಗುತ್ತಾನೆ. ಎಲ್ಲಾ ಲೋಕಗಳ ಸಮಸ್ತ ಸಂಪತ್ತುಗಳಿಗೆ ಸ್ವಾಮಿಯಾಗುತ್ತಾನೆ. ಚಿದಾಕಾಶದ ಚಂದ್ರನಾಗಿ ಸದಾ ಬೆಳಗುತ್ತಿರುತ್ತಾನೆ. ಇದೇ ಮಹಾನ್ ಶಬ್ದದ ಅರ್ಥವಾಗಿರುತ್ತೆ.

## ಏಳನೆ ಅನುವಾಕ

### ಅನ್ನದ ಅನಿಂದಾ, ವ್ರತ ಮತ್ತು ಪ್ರಾಣಾನ್ನರೂಪ ಬ್ರಹ್ಮದ ಉಪಾಸನೆಯ ಫಲ

ಅನ್ನಂ ನನಿಂದ್ಯಾತ್ | ತದ್ವ್ರತಮ್ | ಪ್ರಾಣೋವಾ ಅನ್ನಮ್ | ಶರೀರಮನ್ನಾದಮ್|ಪ್ರಾಣೇ ಶರೀರಂ ಪ್ರತಿಷ್ಠಿತಮ್ ಶರೀರೆಪ್ರಾಣಃ ಪ್ರತಿಷ್ಠಿತಃ| ತದೇತದನ್ನಮನ್ನೇ ಪ್ರತಿಷ್ಠಿತಮ್ | ಸ ಯ ಏತದನ್ನಮನ್ನೇ ಪ್ರತಿಷ್ಠಿತಮ್ ವೇದ ಪ್ರತಿತಿಷ್ಠತಿ | ಅನ್ನವಾನನ್ನಾದೋ ಭವತಿ | ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ | ಮಹಾನ್ ಕೀರ್ತ್ಯಾ || ೧ ||

ಅನ್ನವನ್ನು ನಿಂದಿಸಬಾರದು. ಅದು ಬ್ರಹ್ಮಜ್ಞಾನ ರೂಪ ವ್ರತವಾಗಿದೆ. ಪ್ರಾಣವೇ ಅನ್ನವಾಗಿದೆ. ಮತ್ತು ಶರೀರವು ಅನ್ನಾದವಾಗಿದೆ. ಪ್ರಾಣದಲ್ಲಿ ಶರೀರವು ಇರುತ್ತೆ. ಶರೀರದಲ್ಲಿ ಪ್ರಾಣವು ಇರುತ್ತೆ. (ಇವು ಪರಸ್ಪರ ಅನ್ಯೋನ್ಯ ಆಶ್ರಿತವುಗಳಾಗಿರುವುದರಿಂದ ಒಂದರ ಅನ್ನ ಒಂದು ಆಗಿದೆ ಎಂದರಿಯಬೇಕು). ಈ ಅನ್ನ ಪ್ರಾಣಗಳೆರಡು ಅನ್ನವು, ಅನ್ನದಲ್ಲಿ ಪ್ರತಿಷ್ಠಿತವಾಗಿದೆ. ಅನ್ನವು ಅನ್ನದಲ್ಲಿ ಸ್ಥಿತವಾಗಿರುತ್ತೆಂದು ಯಾರು ತಿಳಿಯುತ್ತಾನೋ ಅವನು ಲೋಕದಲ್ಲಿ ಪ್ರಖ್ಯಾತಿ ಯನ್ನು ಪಡೆಯುತ್ತಾನೆ. ಬಹಳ ಅನ್ನವುಳ್ಳವನಾಗುತ್ತಾನೆ. ಅನ್ನಭೋಕ್ತ ನಾಗುತ್ತಾನೆ. ಸಂತಾನ ಸಂಪತ್ತುಳ್ಳವನಾಗುತ್ತಾನೆ. ಅನೇಕ ಪಶುಗಳುಳ್ಳ ವನಾಗುತ್ತಾನೆ. ಬ್ರಹ್ಮತೇಜಸ್ವಿಯಾಗುತ್ತಾನೆ. ಕೀರ್ತಿಶಾಲಿಯಾಗುತ್ತಾನೆ. ಕರುಣಾಶಾಲಿಯಾಗುತ್ತಾನೆ. ಅನ್ನದಾತನಾಗುತ್ತಾನೆ. ಸಕಲ ಭೋಗಗಳ ಭೋಕ್ತೃವಾಗುತ್ತಾನೆ. ರೋಗರಹಿತನಾಗುತ್ತಾನೆ. ಮಹಾನ್ ವಿಭೂತಿ ಯಾಗುತ್ತಾನೆ.

## ಎಂಟನೆ ಅನುವಾಕ

### ಅನ್ನದ ಅತ್ಯಾಗರೂಪ ವ್ರತೆ ಮತ್ತು ಜಲಜ್ಯೋತಿರೂಪಾ ಅನ್ನಬ್ರಹ್ಮದ ಉಪಾಸನೆಯ ಫಲ

ಅನ್ನಂನ ಪರಿಚಕ್ಷೀತ | ತದ್ವ್ರತಮ್ | ಆಪೋವಾ ಅನ್ನಮ್ | ಜ್ಯೋತಿ ರನ್ನಾದಮ್ | ಅಪ್ಸುಜ್ಯೋತಿಃ ಪ್ರತಿಷ್ಠಿತಮ್ | ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ | ತದೇತದನ್ನಮನ್ನೇ ಪ್ರತಿಷ್ಠಿತಮ್ | ಸ ಯ ಏತದನ್ನಮನ್ನೇ ಪ್ರತಿಷ್ಠಿತಮ್

ವೇದ ಪ್ರತಿತಿಷ್ಠತಿ | ಅನ್ನವಾನನ್ನಾದೋ ಭವತಿ | ಮಹಾನ್ ಭವತಿ | ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ | ಮಹಾನ್ ಕೀರ್ತ್ಯಾ || ೧ ||

ಅನ್ನದ ತ್ಯಾಗ ಮಾಡಬಾರದು- ಇದು ವ್ರತವಾಗಿದೆ. ಜಲವೆ ಅನ್ನವಾಗಿದೆ. ಜ್ಯೋತಿ ಅನ್ನಾದವಾಗಿದೆ. ಜಲದಲ್ಲಿ ಜ್ಯೋತಿ ಪ್ರತಿಷ್ಠಿತವಾಗಿದೆ. ಮತ್ತು ಜ್ಯೋತಿಯಲ್ಲಿ ಜಲಸ್ಥಿತವಾಗಿದೆ. ಈ ಪ್ರಕಾರ ಇವೆರಡು ಪರಸ್ಪರವಾಗಿ ಅನ್ನವಾಗಿ ಅನ್ನದಲ್ಲಿ ಸ್ಥಿತವಾಗಿವೆ. ಪೂರ್ವೋಕ್ತ ಪ್ರಕಾರ ಯಾರು ಅನ್ನದಲ್ಲಿ ಅನ್ನಸ್ಥಿತವಾಗಿದೆಯೆಂದು ತಿಳಿಯುತ್ತಾನೋ ಅವನು ಲೋಕದಲ್ಲಿ ಪ್ರಸಿದ್ಧ ಪುರುಷನಾಗುತ್ತಾನೆ. ಅನ್ನಸಂಪತ್ತುಳ್ಳವನಾಗುತ್ತಾನೆ. ಅನ್ನದಾತನಾಗುತ್ತಾನೆ. ಅನ್ನಭೋಕ್ತೃವಾಗುತ್ತಾನೆ. ಪಶುಪತ್ನಿಸುತಾಲಯಾದಿ ಮಹತ್ ಸಂಪತ್ತುಳ್ಳವನಾಗುತ್ತಾನಾದ ಕಾರಣ ಮಹಾನ್ ಪುರುಷನಾಗುತ್ತಾನೆ. ಮಹತ್ ಕೀರ್ತಿಶಾಲಿಯಾಗುತ್ತಾನೆ.

## ಒಂಬತ್ತನೆ ಅನುವಾಕ

### ಅನ್ನಸಞ್ಚಯರೂಪವ್ರತ ಭೂವ್ಯಾಕಾಶ ರೂಪಬ್ರಹ್ಮನ ಉಪಾಸನೆಯ ಫಲ

ಅನ್ನಂ ಬಹುಕುರ್ವೀತ| ತದ್ವ್ರತಮ್| ಪೃಥಿವೀವಾಅನ್ನಮ್| ಆಕಾಶೋಽ ಅನ್ನಾದಃ | ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ | ಆಕಾಶೆ ಪೃಥಿವೀ ಪ್ರತಿಷ್ಠಿತಾ | ತದೇತದನ್ನಮನ್ನೇ ಪ್ರತಿಷ್ಠಿತಮ್ | ಸ ಯ ಏತದನ್ನ ಮನ್ನೇ ಪ್ರತಿಷ್ಠಿತಮ್ ವೇದ ಪ್ರತಿತಿಷ್ಠತಿ | ಅನ್ನವಾನನ್ನಾದೋಭವತಿ | ಮಹಾನ್ ಭವತಿ | ಪ್ರಜಯಾ ಪಶುಭಿರ್ಬ್ರಹ್ಮ ವರ್ಚಸೇನ | ಮಹಾನ್ ಕೀರ್ತ್ಯಾ || ೧ ||

ಅನ್ನವನ್ನು ಹೆಚ್ಚಿಸಬೇಕು. ಆದು ವ್ರತವಾಗಿದೆ. ಭೂಮಿಯು ಅನ್ನವಾಗಿದೆ. ಆಕಾಶವು ಅನ್ನಾದವಾಗಿದೆ (ಅನ್ನಭೋಕ್ತೃ). ಭೂಮಿಯಲ್ಲಿ ಆಕಾಶವು ಸ್ಥಿತವಾಗಿದೆ. ಆಕಾಶದಲ್ಲಿ ಭೂಮಿಯು ಇದೆ. ಭೂಮಿ ಆಕಾಶಗಳೆರಡು ಅನ್ನಬ್ರಹ್ಮದಲ್ಲಿ ಸ್ಥಿತವಾಗಿದೆ. ಪೂರ್ವೋಕ್ತ ರೀತಿಯಂತೆ ಅನ್ನವು ಅನ್ನದಲ್ಲಿ ಸ್ಥಿತವಾಗಿದೆ ಎಂದು ಯಾರು ತಿಳಿಯುತ್ತಾನೋ ಅವನು ಪ್ರಖ್ಯಾತ ಪುರುಷನಾಗುತ್ತಾನೆ. ಅನಂತ ಅನ್ನವುಳ್ಳವನಾಗುತ್ತಾನೆ. ಅನಾದಾತನಾಗುತ್ತಾನೆ. ಪ್ರಜಾ ಪಶುಗಳಿಂದ ಕೂಡಿರುವನಾಗುತ್ತಾನೆ. ಬ್ರಹ್ಮತೇಜಸ್ವಿ

ಯಾಗಿರುವನಾದ್ದರಿಂದ ಮಹಾನ್ ಪುರುಷನಾಗುತ್ತಾನೆ. ಕೀರ್ತಿಶಾಲಿ ಯಾಗುತ್ತಾನೆ.

## ಹತ್ತನೆ ಅನುವಾಕ

### ಅತಿಥಿಗೆ ಆಶ್ರಯಕೊಡಬೇಕು, ಅನ್ನ ಕೊಡಬೇಕು, ಅನ್ನುವುದರ ವಿಚಾರ ಅನ್ನ ದಾನದ ಫಲ ವರ್ಣನ

ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಾಯಾಬಹ್ವನ್ನಂ ಪ್ರಾಪ್ನುಯಾತ್ । ಆರಾಧ್ಯಸ್ಮಾ ಅನ್ನಮಿತ್ಯಾ ಚಕ್ಷತೇ । ಏತದ್ವೈಮುಖತೋಽನ್ನಂರಾದ್ಧಮ್ । ಮುಖತೋಽಸ್ಮಾ ಅನ್ನಂ ರಾಧ್ಯತೇ । ಏತದ್ವೈಮಧ್ಯತೋಽನ್ನಂರಾದ್ಧಮ್ । ಮಧ್ಯತೋಽಸ್ಮಾ ಅನ್ನಂ ರಾಧ್ಯತೇ । ಏತದ್ವಾಅನ್ತತೋಽನ್ನಂರಾದ್ಧಮ್ । ಅನ್ತತೋಽಸ್ಮಾ ಅನ್ನಂ ರಾಧ್ಯತೇ ॥ ೧ ॥

ಮನೆಗೆ ಬಂದ ಅತಿಥಿಯನ್ನು ನಿರಾಕರಿಸಬಾರದು. ಇದು ವ್ರತವಾಗಿದೆ. ಹಲಕೆಲವು ಪ್ರಕಾರದಿಂದ ಬಹಳವಾಗಿ ಅನ್ನದ ಆರ್ಜನೆಯನ್ನು ಮಾಡಬೇಕು. ಏಕೆಂದರೆ! ಗೃಹಕ್ಕೆ ಬಂದ ಅತಿಥಿಗಳಿಗೆ ಅನ್ನೋಪಾಸಕನು ನಾನು ಅನ್ನ ಸಂಗ್ರಹಗೊಳಿಸಿರುತ್ತೇನೆ ಎಂದು ಹೇಳುತ್ತಾನೋ ಮತ್ತು ಯಾವ ಪುರುಷನು ಮೊದಲಾವಸ್ಥೆಯಲ್ಲೆ ಬಂದ ಅತಿಥಿಗೆ ಅನ್ನವನ್ನು ಕೊಡುತ್ತಾನೋ ಅವನಿಗೆ ಅವನ ಮುಖ್ಯವೃತ್ತಿಯಿಂದಲೆ ಅನ್ನದ ಪ್ರಾಪ್ತಿಯಾಗುತ್ತೆ. ಮಧ್ಯಾವಸ್ಥೆಯಲ್ಲಿ ಕೊಟ್ಟರೆ ಮಧ್ಯಾವಸ್ಥೆಯಲ್ಲೆ ಅನ್ನದ ಪ್ರಾಪ್ತಿಯಾಗುತ್ತೆ. ಅಂತಿಮ ಅವಸ್ಥೆಯಲ್ಲಿ ಅನ್ನದಾನ ಮಾಡಿದವನಿಗೆ ಹೀನವೃತ್ತಿಯಿಂದ ಅನ್ನಪ್ರಾಪ್ತಿಯಾಗುತ್ತೆ.

ಯ ಏವಂ ವೇದ । ಕ್ಷೇಮ ಇತಿವಾಚಿ । ಯೋಗಕ್ಷೇಮ ಇತಿ । ಪ್ರಾಣಾಪಾನಯೋಃ । ಕರ್ಮೇ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿಪಾಯೌ ॥ ಇತಿ ಮಾನುಷೀಃ ಸಮಾಜ್ಞಾಃ । ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ ॥ ೨ ॥

ಯಾರು ಹೀಗೆ ತಿಳಿಯುತ್ತಾನೋ ಅವನು ಪೂರ್ವೋಕ್ತ ಫಲಗಳನ್ನು ಪಡೆಯುತ್ತಾನೆ. ಬ್ರಹ್ಮನು ವಾಣಿಯಲ್ಲಿ ಕ್ಷೇಮವಾಗಿದ್ದಾನೆ. ಯೋಗಕ್ಷೇಮ ರೂಪದಿಂದ ಪ್ರಾಣಾಪಾನಗಳಲ್ಲಿಯೂ, ಕರ್ಮರೂಪದಿಂದ ಕೈಯಲ್ಲೂ, ಚರಿಸುವುದರಿಂದ ಚರಣದಲ್ಲೂ, ತ್ಯಾಗರೂಪದಿಂದ ಪಾಯುವಿನಲ್ಲೂ ಬ್ರಹ್ಮನಿರುವನೆಂದು ಮನುಷ್ಯಸಂಬಂಧಿ ರೂಪ ಉಪಾಸನೆ ಇದೆ. ಈಗ ದೇವತಾಸಂಬಂಧ ರೂಪ ಉಪಾಸನೆ ಹೇಳಲ್ಪಡುತ್ತೆ. ತೃಪ್ತಿರೂಪದಿಂದ ವೃಷ್ಟಿ (ಮಳೆ)ಯಲ್ಲೂ, ಬಲರೂಪದಿಂದ ವಿದ್ಯುತ್ತಿನಲ್ಲೂ (ಮಿಂಚು)

ಯಶ ಇತಿ ಪಶುಷು ಜ್ಯೋತಿರಿತಿ ನಕ್ಷತ್ರೇಷು। ಪ್ರಜಾತಿರಮೃತಮಾನನ್ದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ । ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ। ಮಹಾನ್ ಭವತಿ । ತನ್ಮನ ಇತ್ಯುಪಾಸೀತ। ಮಾನವಾನ್ ಭವತಿ ॥ ೩ ॥

ಯಶೋರೂಪದಿಂದ ಪಶುಗಳಲ್ಲೂ, ಜ್ಯೋತಿರೂಪದಿಂದ ನಕ್ಷತ್ರಗಳಲ್ಲೂ, ಪ್ರಜಾರೂಪದಿಂದಲೂ, ಅಮೃತರೂಪದಿಂದಲೂ, ಆನಂದರೂಪದಿಂದಲೂ, ಉಪಸ್ಥೇಂದ್ರಿಯದಲ್ಲೂ, ಸರ್ವರೂಪದಿಂದ ಆಕಾಶದಲ್ಲೂ, ಬ್ರಹ್ಮನಿರುವನೆಂದು ತಿಳಿದು ಉಪಾಸನೆ ಮಾಡಬೇಕು. ಬ್ರಹ್ಮನು ಸರ್ವಾಧಾರನೆಂದು ತಿಳಿದು ಉಪಾಸನೆ ಮಾಡಬೇಕು. ಇದರಿಂದ ಉಪಾಸಕನು ಮಹನ್ ಪ್ರತಿಷ್ಠಿತ ಪುರುಷನಾಗುತ್ತಾನೆ. ಬ್ರಹ್ಮನು ಮಹಾತೇಜಸ್ವಿ ಎಂದು ಉಪಾಸನೆಮಾಡಿದವನು ಮಹಾ ತೇಜಸ್ವಿಯಾಗುತ್ತಾನೆ. ಮನೋರೂಪದಿಂದ ಉಪಾಸನೆ ಮಾಡಿದವನು ಮಹಾ ಮನಸ್ವೀ ಆಗುತ್ತಾನೆ (ಮನನ ಮಾಡುವ ಸಾಮರ್ಥ್ಯ).

ತನ್ನಮ ಇತ್ಯುಪಾಸೀತ । ನಮ್ಯನ್ತೇಽಸ್ಮೈ ಕಾಮಾಃ । ತದ್ ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯನ್ತೇ ದ್ವಿಷನ್ತಃ ಸಪತ್ನಾಃ । ಪರಿಯೇಽಪ್ರಿಯಾ ಭ್ರಾತೃವ್ಯಾಃ ಸ ಯಶ್ಚಾಯಂ ಪುರುಷೇ ಯಶ್ಚಾ ಸಾವಾದಿತ್ಯೇ ಸ ಏಕಃ ॥ ೪ ॥

ಬ್ರಹ್ಮನನ್ನು ನಮಃ ಎಂಬ ಭಾವನೆಯಿಂದ ಉಪಾಸನೆ ಮಾಡಬೇಕು. ಹೀಗೆ ಉಪಾಸನೆಮಾಡಿದರೆ ಅವನ ವಿಷಯದಲ್ಲಿ ಎಲ್ಲಾ ಕಾಮ್ಯ ಪದಾರ್ಥಗಳು ಅತಿ ವಿನಯ ಭಾವದಿಂದ ವರ್ತಿಸುತ್ತವೆ. ಅದು ಬ್ರಹ್ಮವಾಗಿದೆ ಎಂದು ಉಪಾಸನೆ ಮಾಡಿದವನು ಬ್ರಹ್ಮನಿಷ್ಠನಾಗುತ್ತಾನೆ. ಆ ಬ್ರಹ್ಮನು ಪರಿಮರ ವೆಂದು ಉಪಾಸನೆ ಮಾಡಿದವನ (ಪರಿಮರವೆಂದರೆ ಆಕಾಶ) ದ್ವೇಷಿಗಳು ಸತ್ತುಹೋಗುತ್ತಾರೆ. ಒಂದು ಪಕ್ಷ ಅವರ ಅಣ್ಣತಮ್ಮಂದಿರ ಮಕ್ಕಳಾ ದರೂ ಸಹ ಸತ್ತುಹೋಗುತ್ತಾರೆ. ಯಾವ ಪುರುಷನು ಇಲ್ಲಿರುವನೋ ಅವನೇ ಆದಿತ್ಯದಲ್ಲೂ ಇರುವನು. ಅಂದರೆ ಇಬ್ಬರಲ್ಲೂ ಒಬ್ಬನಾಗಿರುವನು.

### ತನ್ನಲ್ಲೂ ಆದಿತ್ಯನಲ್ಲೂ ಇರುವ ಚೈತನ್ಯವಂದು ಎಂದು ತಿಳಿಯುವ ಉಪಾಸಕನ ಫಲ

ಸ, ಯ, ಏವಂವಿತ್ | ಅಸ್ಮಾಲ್ಲೋಕಾತ್ಪ್ರೇತ್ಯ | ಏತಮನ್ನಮಯ ಮಾತ್ಮಾನಮುಪ ಸಂಕ್ರಮ್ಯ| ಏತಂ ಪ್ರಾಣಮಯಮಾತ್ಮಾನಮುಪ ಸಂಕ್ರಮ್ಯ| ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ | ಏತಂ ವಿಜ್ಞಾನಮಯ ಮಾತ್ಮಾನಮುಪ ಸಂಕ್ರಮ್ಯ| ಏತಮಾನನ್ದಮಯಮಾತ್ಮಾನಮುಪ ಸಂಕ್ರಮ್ಯ| ಇಮಾಁಲ್ಲೋಕಾಁಕಾಮಾನ್ನೀ ಕಾಮರೂಪ್ಯನುಸಂಚರಁ ಏತತ್ಸಾಮಗಾ ಯನ್ನಾಸ್ತೇ || ಹಾ ३, ವು, ಹಾ, ३, ವು ಹಾ, ३ ವು, || ೫ ||

ಪೂರ್ವೋಕ್ತ ರೀತಿಯಾಗಿ ಉಪಾಸನೆ ಮಾಡಿದವನು ಈ ಲೋಕದಿಂದ ನಿವೃತ್ತನಾಗಿ ಅನ್ನಮಯಾತ್ಮ ಲೋಕಕ್ಕೆ ಹೋಗುತ್ತಾನೆ. ನಂತರ ಅದನ್ನು ಬಿಟ್ಟು ಪ್ರಾಣಮಯಾತ್ಮ ಲೋಕಕ್ಕೆ ಹೋಗುತ್ತಾನೆ. ನಂತರ ಅಲ್ಲಿಂದ ಮನೋಮಯಾತ್ಮಲೋಕಕ್ಕೆ ಹೋಗುತ್ತಾನೆ. ಪುನಃ ಅದನ್ನು ಬಿಟ್ಟು ವಿಜ್ಞಾನ ಮಯಾತ್ಮಲೋಕಕ್ಕೆ ಹೋಗುತ್ತಾನೆ. ನಂತರ ಅದೂ ಬಿಟ್ಟು ಆನಂದಮಯಾತ್ಮ ಲೋಕಕ್ಕೆ ಹೋಗುತ್ತಾನೆ. ಅಂದರೆ ಆನಂದಸ್ವರೂಪನಾಗುತ್ತಾನೆ. (ಅರ್ಥಾತ್ ಈ ಪಂಚಕೋಶಗಳಿಗೆ ಅತೀತನಾಗಿ ಪಂಚಕೋಶಗಳಿಗೂ ಆತ್ಮರೂಪನಾಗು ತ್ತಾನೆ. ಇಲ್ಲಿ ಬ್ರಹ್ಮದ ಅಭೇದೋಪಾಸನೆಯನ್ನು ಕ್ರಮಕ್ರಮವಾಗಿ ಹೇಳಲ್ಪ ಟ್ಟಿರುತ್ತೆ) ಅಜರನಾಗುತ್ತಾನೆ. ಅಜನ್ಮನಾಗುತ್ತಾನೆ. ಅಮೃತನಾಗುತ್ತಾನೆ.

ಸತ್ಯಜ್ಞಾನಮನಂತ ಸ್ವರೂಪನಾಗುತ್ತಾನೆ. ಅನಂತ ಕಾಮನಾ ಸ್ವರೂಪನಾಗಿ ಆತ್ಮರೂಪದಿಂದ ಸರ್ವಸುಖವನ್ನನುಭವಿಸುತ್ತಾನೆ. ಸರ್ವರೂಪನಾಗುತ್ತಾನೆ. ಅಂದರೆ ಕಾಮರೂಪಿಯಾಗುತ್ತಾನೆ. ಸದಾ ಸಾಮಗಾನ ಮಾಡುತ್ತಲಿರುತ್ತಾನೆ. (ಅಂದರೆ ಬ್ರಹ್ಮಾನು ಸಂಧಾನದಲ್ಲಿರುತ್ತಾನೆ). ಏಕೆಂದರೆ! ಸಾಮಶಬ್ದದ ಅರ್ಥ ಬ್ರಹ್ಮಸಮತ್ವ ಈ ಸಮತ್ವವನ್ನೆ ಸಾಮವೆಂತ ಹೇಳುತ್ತಾರೆ. ಎಲ್ಲರ ಮೇಲೂ ಕೃಪೆಮಾಡುತ್ತಾ ಎಲ್ಲಾ ಕಡೆಯಲ್ಲೂ ತಿರುಗುತ್ತಲಿರುತ್ತಾನೆ. ಆತ್ಮೈಕ್ಯವನ್ನು ಬೋಧಿಸುತ್ತಲಿರುತ್ತಾನೆ. ಹಾ, ೩ವು, ಹಾ, ೩ವು, ಹಾ, ೩ವು ಎಂದು ಗಾನ ಮಾಡುತ್ತಾನೆ. (ಅಂದರೆ ಬ್ರಹ್ಮಾನುಭವವು ಅತಿ ವಿಸ್ಮಯಕರವಾದದ್ದು.)

### ಸಾಮಗಾನದ ಸ್ವರೂಪ

ಅಹಮನ್ನಮಹಮನ್ನಮಹಮನ್ನಮ್ | ಅಹಮನ್ನಾದೋ೩ಹಮನ್ನಾದೋ೩ಹಮನ್ನಾದಃ | ಅಹಂಶ್ಲೋಕಕೃದಹಂಶ್ಲೋಕ ಕೃದಹಂಶ್ಲೋಕಕೃತ್ | ಅಹಮಸ್ಮಿ ಪ್ರಥಮಜಾ ಋತಾ೩ಸ್ಯ | ಪೂರ್ವಂದೇವೇಭ್ಯೋಽಮೃತಸ್ಯ ನಾ೩ಭಾಯಿ | ಯೋಮಾ ದದಾತಿ ಸ ಇದೇವ ಮಾ೩ವಾಃ | ಅಹಮನ್ನಮನ್ನಮದನ್ತಮಾ೩ದ್ಮಿ | ಅಹಂ ವಿಶ್ವಂ ಭುವನ ಮಭ್ಯಭವಾ೩ಮ್ | ಸುವರ್ನಜ್ಯೋತೀಃ ಯ ಏವಂ ವೇದ | ಇತ್ಯುಪನಿಷತ್ || ೬ ||

ನಾನು ಅನ್ನ(ಭೋಗ್ಯ)ವಾಗಿದ್ದೇನೆ.(ಇದನ್ನು ಮೂರಾವರ್ತಿ ಹೇಳುವುದು) ನಾನು ಅನ್ನಾದ (ಭೋಕ್ತ)ನಾಗಿದ್ದೇನೆ. ನಾನು ಶ್ಲೋಕಕೃತ (ಅನ್ನ ಸಂಗ್ರಹ ಕರ್ತ)ನಾಗಿದ್ದೇನೆ. ನಾನೆ ಶ್ಲೋಕಕೃತನಾಗಿದ್ದೇನೆ. ಕೃತಶ್ಲೋಕನಾಗಿದ್ದೇನೆ. ಜಗತ್ ಪೂರ್ವದಲ್ಲಿ ಹುಟ್ಟಿದ ಸತ್ಯರೂಪ (ಹಿರಣ್ಯಗರ್ಭ)ನೆ ನಾನಾಗಿರುತ್ತೇನೆ. ನಾನೆ ಎಲ್ಲಾ ವಿರಾಟಾದಿ ಎಲ್ಲಾ ದೇವತೆಗಳ ಅಮೃತತ್ವದ ಕೇಂದ್ರ ಸ್ವರೂಪ ನಾಗಿರುತ್ತೇನೆ. ಯಾರು ಅನ್ನಾರ್ಥಿಗಳಿಗೆ ಅನ್ನ ಕೊಡುತ್ತಾನೋ, ಅವನು ನನ್ನನ್ನು ರಕ್ಷಿಸುತ್ತಾನೆ. ಯಾರು ಕೊಡುವುದಿಲ್ಲವೋ ಅವರಿಗೆ ನಾನು ಅನ್ನದಂತೆ ತಿನ್ನುತ್ತೇನೆ. ನಾನು ಈ ಸಂಪೂರ್ಣ ಭುವನವನ್ನು ಪರಾಭವ (ಉಪಸಂಹಾರ) ಗೊಳಿಸುತ್ತೇನೆ. ಸೂರ್ಯವತ್ ನನ್ನ ಜ್ಯೋತಿ ನಿತ್ಯಪ್ರಕಾಶವಾಗಿದೆ. ಇದೇ

ಈ ಉಪನಿಷತ್ತಾಗಿದೆ. ಇದನ್ನು ಯಾರು ತಿಳಿಯುವನೋ ಅವನು ಪೂರ್ವೋಕ್ತ ಫಲ ಪಡೆಯುತ್ತಾನೆ.

ಶಾನ್ತಿ ಪಾಠ

ಓಂ ಶಂನೋ ಮಿತ್ರಃ ಶಂ ವರುಣಃ । ಶಂನೋ ಭವತ್ವರ್ಯಮಾ । ಶಂನ ಇನ್ದ್ರೋ ಬೃಹಸ್ಪತಿಃ । ಶಂನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾ ಮೇವ ಪ್ರತ್ಯಕ್ಷಂ ಬ್ರಹ್ಮವಾದಿಷಮ್ ಋತಮವಾದಿಷಮ್ ಸತ್ಯಮವಾದಿಷಮ್ । ತನ್ಮಾಮಾವೀತ್ । ತದ್ವಕ್ತಾರಮಾವೀತ್ ಆವೀನ್ಮಾಮ್ । ಆವೀದ್ವಕ್ತಾರಮ್ ॥

ಶಾನ್ತಿಃ । ಶಾನ್ತಿಃ । ಶಾನ್ತಿಃ ॥

**ತೈತ್ತಿರೀಯ ಉಪನಿಷತ್ತಿಗೆ ಅದ್ವೈತ ಶಿಖಾಮಣಿ ಬ್ರಂ ಶ್ರೀ ಶಿವಾನಂದ ಸ್ವಾಮೀಜಿಯವರು ಬರೆದ ಅನುವಾದವು ಪೂರ್ಣವಾಯಿತು.**

**ಶ್ರೀ ಶಂಕರ ಸದ್ಗುರವೇ ನಮಃ**

ಶ್ರೀ ಶಂಕರ ಸದ್ಗುರವೇ ನಮಃ

# ಐತರೇಯ ಉಪನಿಷತ್ಪ್ರಾರಮ್ಭ

## ಪ್ರಥಮ ಅಧ್ಯಾಯ ಪ್ರಾರಂಭಃ

### ಶಾಂತಿ ಪಾಠ

ಓಂ ವಾಙ ಮೆ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾ ವಿರಾವೀರ್ಮ ಏಧಿ । ವೇದಸ್ಯಮ ಆಣೀಸ್ಥಃಶ್ರುತಂ ಮೆಮಾ ಪ್ರಹಾಸೀಃ । ಅನೇನಾಧೀತೇನಾಹೋರಾತ್ರಾನ್ ಸನ್ದಧಾಮ್ಯೃತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಮ್ ॥

### ಪ್ರಥಮ ಖಣ್ಡ

### ಸೃಷ್ಟಿ ವಿಚಾರ

ಓಂ ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ಕಿಂಚ ನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥ ೧ ॥

ಮೊದಲು (ಈ ಜಗತ್ತು) ಏಕರೂಪವಾದ ಆತ್ಮವೇ ಆಗಿತ್ತು. ಆತ್ಮನ ವಿನಃ ಯಾವ ವಸ್ತುವೂ ಇರಲಿಲ್ಲ. ಆಗ ಆತ್ಮನು ಲೋಕವನ್ನು ರಚಿಸಬೇಕೆಂದು ಯೋಚಿಸಿದನು.

### ಸೃಷ್ಟಿ ಕ್ರಮ

ಸ ಇಮಾನ್‌ಲ್ಲೋಕಾನಸೃಜತ । ಅಮ್ಭೋಮರೀಚೀರ್ಮರಮಾ ಪೋದೋಽಮ್ಭಃ ಪರೇಣ ದಿವಂದ್ಯೌಃ ಪ್ರತಿಷ್ಠಾನ್ತರಿಕ್ಷಂ ಮರೀಚಯಃ ಪೃಥಿವೀ ಮರೋ ಯಾ ಅಧಸ್ತಾತ್ತಾ ಆಪಃ ॥ ೨ ॥

ಆ ಆತ್ಮನು ಈ ಲೋಕಗಳನ್ನು ಸೃಷ್ಟಿಸಿದನು. ಯಾವುದೆಂದರೆ? ಅಂಬ, ಮರೀಚಿ, ಮರ ಮತ್ತು ಅಪ. ಅಂಬ ಎಂದರೇನು? ದ್ಯುಲೋಕ

ಕ್ಕಿಂತಲೂ (ಮಿಂಚು) ಬೇರೆಯಾಗಿದೆ. ಮತ್ತು ಸ್ವರ್ಗ ಯಾವ ಅಂಬಲೋಕದ ಆಧಾರವಾಗಿದೆಯೋ ಅದು ಅಂಬವೆನಿಸಿದೆ. ಅಥವಾ ಜಲವನ್ನು ಧರಿಸಿರುವುದರಿಂದ ಅಂಬಲೋಕವೆನಿಸಿದೆ. ಅಂತರಿಕ್ಷವು (ಭುವರ್ಲೋಕ)ಮರೀಚಿಯಾಗಿದೆ. ಅಥವಾ ಕಿರಣಗಳ ಸಮೂಹದಿಂದ ಕೂಡಿದ್ದು ಮರೀಚಿ ಲೋಕವಾಗಿದೆ. ಪೃಥಿವಿಯು ಮೃತ್ಯುಲೋಕವಾಗಿದೆ. ಏಕೆಂದರೆ! (ಮರಣದ ಸಂಬಂಧವು ಇರುತ್ತಾದ್ದರಿಂದ) ಇದಕ್ಕೂ ಕೆಳಗಡೆಯು ಲೋಕವೆ ಆಪ(ಜಲ)ಲೋಕವಾಗಿದೆ.

## ಲೋಕಪಾಲನ ರಚನಾ

ಸ ಈಕ್ಷತೇಮೇ ನು ಲೋಕಾಲೋಕಪಾಲಾನ್ನು ಸೃಜಾ ಇತಿ। ಸೋದ್ಭ್ಯ ಏವ ಪುರುಷಂಸಮುದ್‍ಧೃತ್ಯಾಮೂರ್ಛಯತ್ ॥ ೩ ॥

ಲೋಕಗಳನ್ನು ಮಾಡಿದ್ದಾಯಿತು. ಈ ಲೋಕಪಾಲರನ್ನು ಸೃಷ್ಟಿ ಮಾಡಬೇಕು ಎಂದು ಆತ್ಮನು ಯೋಚಿಸಿದನು. ನಂತರ ಜಲದಿಂದ ಒಂದು ಪುರುಷಾಕಾರವನ್ನು ಹೊರತೆಗೆದನು. ಆ ಪುರುಷಾಕೃತಿಯು ಅವಯವಾದಿ ಗಳಿಂದ ಕೂಡಿತ್ತು.

## ಇಂದ್ರಿಯ ಗೋಳಕ ಮತ್ತು ಇಂದ್ರಿಯಗಳು ಅದರ ಅಧಿಷ್ಠಾನ ದೇವತೆಗಳ ವಿಚಾರ

ತಮಭ್ಯತಪತ್ತಸ್ಯಾಭಿತಪ್ತಸ್ಯಮುಖಂ ನಿರಭಿದ್ಯತಯಥಾಣ್ಡಂ ಮುಖಾ ದ್ವಾಗ್‍ವಾಚೋಽಗ್ನಿರ್ನಾಸಿಕೇ ನಿರಭಿದ್ಯೇತಾಂ ನಾಸಿಕಾಭ್ಯಾಂ ಪ್ರಾಣಃ ಪ್ರಾಣಾದ್ವಾಯುರಕ್ಷಿಣೀ ನಿರಭಿದ್ಯೇತಾಮಕ್ಷಿಭ್ಯಾಂ ಚಕ್ಷುಶ್ಚಕ್ಷುಷ ಆದಿತ್ಯಃ ಕರ್ಣೌನಿರಭಿದ್ಯೇತಾಂ ಕರ್ಣಾಭ್ಯಾಂ ಶ್ರೋತ್ರಂ ಶ್ರೋತ್ರಾದ್ದಿಶಸ್ತ್ವಜನಿರ ಭಿದ್ಯತ ತ್ವಚೋಲೋ ಮಾನಿಲೋಮಭ್ಯ ಓಷಧಿ ವನಸ್ಪತಯೋ ಹೃದಯಂನಿರ ಭಿದ್ಯತ ಹೃದಯಾನ್ಮನೋ ಮನಸಶ್ಚನ್ದ್ರಮಾ ನಾಭಿರ್ನಿರಭಿದ್ಯತ ನಾಭ್ಯಾ ಅಪಾನೋಽಪಾನಾನ್ಮೃತ್ಯುಃ ಶಿಶ್ನಂ ನಿರಭಿದ್ಯತ ಶಿಶ್ನಾದ್ರೇತೋರೇತಸ ಆಪಃ

ಆ ವಿರಾಡಾತ್ಮನ ಉದ್ದೇಶದಿಂದ ಈಶ್ವರನು ಸಂಕಲ್ಪಿಸಿದನು. ಅವನ ಸಂಕಲ್ಪಾನುಸಾರ ಪಿಂಡದಿಂದ ಅಂಡಾಕೃತಿಯಲ್ಲಿ ಮುಖವಾಯಿತು. ಮುಖ ದಿಂದ ವಾಕ್ಕಾಯಿತು. ವಾಗಿಂದ್ರಿಯ ದ್ವಾರ ಅಗ್ನಿ ಉತ್ಪತ್ತಿಯಾಯಿತು.

ನಾಸಿಕರಂಧ್ರದ್ವಯವು ಹುಟ್ಟಿತು. ನಾಸಿಕರಂಧ್ರದಿಂದ ಪ್ರಾಣ ಹುಟ್ಟಿತು. ಪ್ರಾಣದಿಂದ ವಾಯುವಾಯಿತು. ನಂತರ ನೇತ್ರಗಳು ಹುಟ್ಟಿತು. ನೇತ್ರದಿಂದ ಚಕ್ಷುರಿಂದ್ರಿಯವಾಯಿತು. ಚಕ್ಷುವಿನಿಂದ ಆದಿತ್ಯನು ಹುಟ್ಟಿದನು. ನಂತರ ಕಿವಿಗಳಾಯಿತು. ಕಿವಿಯಿಂದ ಶ್ರೋತ್ರೇಂದ್ರಿಯವಾಯಿತು. ಶ್ರೋತ್ರೇಂದ್ರಿಯ ದಿಂದ ದಿಕ್ಕು ಹುಟ್ಟಿತು. ನಂತರ ತ್ವಚ ಹುಟ್ಟಿತು. ತ್ವಚದಿಂದ ತ್ವಗಿಂದ್ರಿಯ ಹುಟ್ಟಿತು. ತ್ವಗಿಂದ್ರಿಯದಿಂದ ಲೋಮ ಹುಟ್ಟಿತು. ಲೋಮದಿಂದ ಓಷಧಿಗಳು ವನಸ್ಪತಿಗಳು ಹುಟ್ಟಿತು. ತದನಂತರ ಹೃದಯ ಹುಟ್ಟಿತು. ಹೃದಯದಿಂದ ಮನಸ್ಸು. ಮನದಿಂದ ಚಂದ್ರನು ಹುಟ್ಟಿದನು. ಪುನಃ ನಾಭಿ ಹುಟ್ಟಿತು. ನಾಭಿ ಯಿಂದ ಅಪಾನ. ಅಪಾನದಿಂದ ಮೃತ್ಯುವು ಹುಟ್ಟಿತು. ನಂತರ ಶಿಶ್ನ ಹುಟ್ಟಿತು. ಶಿಶ್ನದಿಂದ ರೇತಸ್ಸು. ರೇತಸ್ಸಿನಿಂದ ಆಪ ಹುಟ್ಟಿತು (ಆಪವೆಂದರೆ ನೀರು).

## ದ್ವಿತೀಯ ಖಣ್ಡ

### ದೇವತೆಗಳ ಅನ್ನ ಮತ್ತು ಆಶ್ರಯಸ್ಥಾನ

ತಾ ಏತಾ ದೇವತಾ ಸೃಷ್ಟಾ ಅಸ್ಮಿನ್ ಮಹತ್ಯರ್ಣವೆ ಪ್ರಾಪತಂಸ್ತ ಮಶನಾಯಪಿಪಸಾಭ್ಯಾಮನ್ವವಾರ್ಜತ ತಾ ಏನಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ ಪ್ರತಿಷ್ಠಿತಾ ಅನ್ನಮದಾಮೇತಿ ॥ ೧ ॥

ಸೃಷ್ಟಿ ರಚನಾನಂತರ ಇಂದ್ರಿಯಾಭಿಮಾನಿ ದೇವತೆಗಳಾದ ಅವರು ಮಹಾ ಸಮುದ್ರದಲ್ಲಿ ಬಿದ್ದು ಹೋದರು. ಪರಮಾತ್ಮ ಆಗ ಆ ಪಿಂಡಗಳನ್ನು ಹಸಿವು ಬಾಯಾರಿಕೆಗಳಿಂದ ಹುರಿದುಂಬಿಸಿ ಬಿಟ್ಟನು. ಆಗ ಆ ದೇವತೆಗಳು ಪರಮಾತ್ಮನನ್ನು ಕುರಿತು ಕೇಳಿದರು. ನಮ್ಮಗಳಿಗೆ ಇರಲು ಒಂದು ಆಶ್ರಯ ಸ್ಥಾನವನ್ನು ತೋರಿಸಿ ಅದರಲ್ಲಿದ್ದು ನಾವು ಅನ್ನ ತಿನ್ನುವಂತವರಾಗುತ್ತೇವೆ.

### ಹಸು ಅಶ್ವಾದಿ ಶರೀರೋತ್ಪತ್ತಿ ಅವುಗಳನ್ನು ಕಂಡು ದೇವತೆಗಳು ತಿರಸ್ಕರಿಸುವರು ಎಂಬ ವಿಚಾರ

ತಾಭ್ಯೋಽಗಾಮಾನಯತ್ತಾ ಅಬ್ರುವನ್ನ ವೈ ನೋಽಯಮಲಮಿತಿ । ತಾಭ್ಯೋಽಶ್ವಮಾನಯತ್ತಾ ಅಬ್ರುವನ್ನ ವೈ ನೋಽಯ ಮಲಮಿತಿ ॥ ೨ ॥

ಆಗ ಹಸುಗಳ ಶರೀರವಾಯಿತು. ದೇವತೆಗಳು ಅದನ್ನು ತಿರಸ್ಕರಿದರು. ಕುದುರೆಗಳ ಶರೀರವಾಯಿತು. ಅದನ್ನು ನಿರಾಕರಿಸಿದರು. ಏಕೆಂದರೆ! ಆ ಶರೀರ ಗಳು ಅವರಿಗೆ ತೃಪ್ತಿಕರವಾಗಿರಲಿಲ್ಲ.

### ಮಾನವ ಶರೀರೋತ್ಪತ್ತಿ—ದೇವತೆಗಳ ಅಂಗೀಕಾರ

ತಾಭ್ಯಃ ಪುರುಷಮಾನಯತ್ತಾ ಅಬ್ರುವನ್ ಸುಕೃತಂ ಬತೇತಿ | ಪುರು ಷೋವಾವ ಸುಕೃತಮ್ | ತಾ ಅಬ್ರವೀದ್ಯಥಾಯತನಂ ಪ್ರಾವಿಶತೇತೀ || ೩ ||

ಆಗ, ಆ ದೇವತೆಗಳಿಗಾಗಿ ಪುರುಷಾಕಾರವಾದ ಶರೀರವಾಯಿತು. ದೇವತೆಗಳು ಹೇಳಿದರು. ಈ ಶರೀರವು ಸುಂದರವಾಗಿದೆ. ನಿಶ್ಚಯವಾಗಿ ಎಲ್ಲಾ ಶರೀರಕ್ಕೂ ಪುರುಷ ಶರೀರ ಸುಂದರವಾಗಿ ರಚಿಸಲ್ಪಟ್ಟಿರುತ್ತೆ. ಆಗ ದೇವತೆಗಳಿಗೆ ಈಶ್ವರನು ಹೇಳಿದನು. ಈಗ ನೀವು, ನೀವು, ನಿಮ್ಮ, ನಿಮ್ಮ, ಆಶ್ರಯ ಸ್ಥಾನಗಳನ್ನು ಪ್ರವೇಶಿಸಿ.

### ದೇವತೆಗಳ ಪ್ರವೇಶ

ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋಭೂತ್ವಾ ನಾಸಿಕೇ ಪ್ರಾವಿಶದಾದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶದ್ದಿಶಃ ಶ್ರೋತ್ರಂ ಭೂತ್ವ ಕರ್ಣೌಪ್ರಾವಿಶನ್ನೋಷಧಿ ವನಸ್ಪತಯೊ ಲೋಮಾನಿ ಭೂತ್ವ ತ್ವಚಂ ಪ್ರಾವಿಶಶ್ಚನ್ದ್ರಮಾ ಮನೋಭೂತ್ವಾ ಹೃದಯಂ ಪ್ರಾವಿಶನ್ಮೃತ್ಯುರ ಪಾನೋ ಭೂತ್ವಾನಾಭಿಂ ಪ್ರಾವಿಶದಾಪೋರೇತೋ ಭೂತ್ವಶಿಶ್ನಂ ಪ್ರಾವಿಶನ್ || ೪ ||

ಅಗ್ನಿಯು ವಾಗೀಂದ್ರಿಯವಾಗಿ ಮುಖದಲ್ಲಿ ಹೋಗಿ ಸೇರಿದನು. ವಾಯುವು ಪ್ರಾಣವಾಗಿ ನಾಸಿಕ ಪುಟದಲ್ಲಿ ಸೇರಿದನು. ಸೂರ್ಯನು ಚಕ್ಷು ವಾಗಿ ಕಣ್ಣಿನಲ್ಲಿ ಸೇರಿದನು. ದಿಗ್ದೇವತೆಗಳು ಕಿವಿಗಳಲ್ಲಿ ಹೋಗಿ ಸೇರಿದವು. ಓಷಧಿಗಳು ಮತ್ತು ವನಸ್ಪತಿಗಳು ಲೋಮವಾಗಿ ಚರ್ಮದಲ್ಲಿ ಸೇರಿಕೊಂಡವು. ಚಂದ್ರನು ಮನಸ್ಸಾಗಿ ಹೃದಯದಲ್ಲಿ ಹೋಗಿ ಸೇರಿದನು. ಮೃತ್ಯುವು ಅಪಾನ ವಾಗಿ ನಾಭಿಯಲ್ಲಿ ಹೋಗಿ ಸೇರಿದನು. ಜಲ ದೇವತೆಯು ವೀರ್ಯರೂಪ ವಾಗಿ ಉಪಸ್ಥೇಂದ್ರಿಯದಲ್ಲಿ ಹೋಗಿ ಸೇರಿಕೊಂಡನು.

### ಹಸಿವು ಬಾಯಾರಿಕೆ ಮತ್ತು ದೇವತೆಗಳ ವಿಭಾಗದ ವಿವರ

ತಮಶನಾಯ ಪಿಪಾಸೆ ಅಬ್ರೂತಾವಮಾವಾಭ್ಯಾಮಭಿಪ್ರಜಾನೀಹೀತಿ। ತೇ ಅಬ್ರವೀದೇತಾಸ್ವೇವ ವಾಂ ದೇವತಾ ಸ್ವಾಭಜಾಮ್ಯೇತಾ ಸುಭಾಗಿನ್ಯೌ ಕರೋಮಿತಿ। ತಸ್ಮಾದ್ಯಸ್ಯೈ ಕಸ್ಯೈಚ ದೇವತಾಯೈ ಹವಿರ್ಗೃಹ್ಯತೆ ಭಾಗಿನ್ಯೌ ವೇವಾಸ್ಯಾಮಶನಾಯಾ ಪಿಪಾಸೆ ಭವತಃ ॥ ೫ ॥

ಹಸಿವು ಬಾಯಾರಿಕೆಯಿಂದ ಬಳಲಿದ ಕ್ಷುತ್ ಪಿಪಸಾ ದೇವತೆಗಳು ಈಶ್ವರನನ್ನು ಕುರಿತು ಕೇಳಿಕೊಂಡರು. ಆಗ ಈಶ್ವರನು ಹೇಳಿದನು. ನಿಮ್ಮಿಬ್ಬರಿಗೂ ಈ ದೇವತೆಗಳ ಮೊದಲು ಭಾಗ ಕೊಡುತ್ತೇನೆ. (ಅಂದರೆ ಭಾಗ ಹೊಂದತಕ್ಕವರನ್ನಾಗಿ ಮಾಡುತ್ತೇನೆ.) ಯಾವ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಕೊಡಲ್ಪಟ್ಟರೂ, ಆ ಹವಿಸ್ಸುಗಳಲ್ಲಿ ನಿಮ್ಮಿಬ್ಬರ ಭಾಗವು ಇದ್ದೇ ಇರುತ್ತೆಂದು ತಿಳಿಯಿರಿ. ಅಂದರೆ ದೇವತೆಗಳಿಗಾಗಿ ಕೊಡಲ್ಪಟ್ಟ ಎಲ್ಲಾ ಹವಿಸ್ಸುಗಳಲ್ಲೂ ನೀವಿಬ್ಬರೂ (ಕ್ಷುದಾ ತೃಷಾ) ಪಾಲುದಾರರಾಗಿರುವಿರಿ.

## ತೃತೀಯ ಖಣ್ಡ

### ಅನ್ನ ರಚನೆಯ ವಿಚಾರ

ಸ ಈಕ್ಷತೇಮೆ ನು ಲೋಕಾಶ್ಚಲೋಕಪಾಲಾಶ್ಚಾನ್ನ ಮೇಭ್ಯಃ ಸೃಜಾ ಇತಿ ॥ ೧ ॥

ಆ, ಈಶ್ವರನು ಯೋಚಿಸಿದನು. ಈಗ ಈ ಲೋಕ ಮತ್ತು ಲೋಕ ಪಾಲರನ್ನು ಸೃಷ್ಟಿಸಿದ್ದು ಆಯಿತು. ಈಗ ಇವರುಗಳಿಗಾಗಿ ಅನ್ನವನ್ನು ಸೃಜಿಸ ಬೇಕಾಗಿದೆ.

### ಅನ್ನದ ರಚನೆ

ಸೋಽಪೋಽಭ್ಯತ ಪತ್ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ ಯಾ, ವೈ, ಸಾ, ಮೂರ್ತಿರಜಾಯತಾನ್ನಂ ವೈ ತತ್ ॥ ೨ ॥

ಅನ್ನ ರಚನೇಚ್ಛು ಈಶ್ವರನು ಜಲವನ್ನು ಉದ್ದೇಶಿಸಿ ತಪಿಸಿದನು (ಧ್ಯಾನಿಸಿದನು). ಆಗ ಆ ಉಪಾದಾನಭೂತವಾದ ಅಭಿತಪ್ತ ಜಲದಿಂದ

ಒಂದು ಮೂರ್ತಿ ಉತ್ಪನ್ನವಾಯಿತು. ಆ ಮೂರ್ತಿಯೆ ಅನ್ನವಾಗಿದೆ. ಅಂದರೆ ಚರಾಚರಾತ್ಮಕ ಘನರೂಪ ಮೂರ್ತಿಯನ್ನೆ ಅನ್ನವೆಂದು ಕರೆಯುತ್ತಾರೆ.

### ಅನ್ನಗ್ರಹಣದ ಉದ್ಯೋಗ

ತದೇನತ್ಸೃಷ್ಟಂ ಪರಾಜತ್ಯಜಿಘಾಂಸತ್ತಾದ್ವಾಚಾಜಿಘೃಕ್ಷತ್ತನ್ನಾಶಕ್ನೋದ್ವಾಚಾ ಗ್ರಹಿತುಮ್ । ಯುದ್ಧೈನದ್ವಾಚಾಗ್ರಹೈಷ್ಯದಭಿವ್ಯಾಹೃತ್ಯಹೈವಾನ್ನ ಮತ್ರಪ್ಸ್ಯತ್ ॥ ೩ ॥

ಲೋಕ ಮತ್ತು ಲೋಕಪಾಲರ ನಿಮಿತ್ತ ಸೃಷ್ಟಿಸಿದ ಅನ್ನವು ಓಡುವುದಕ್ಕೆ ಪ್ರಾರಂಭಮಾಡಿತು. ಏಕೆಂದರೆ! "ಬೆಕ್ಕಿಗೆ ಕಂಡು ಹೆದರಿ ಓಡುವ ಇಲಿಯಂತೆ" ನನಗೆ ಭಕ್ಷಣ ಮಾಡುವವನು ನನ್ನ ಮೃತ್ಯುವೆಂದು ತಿಳಿದು ಓಡಲಾರಂಭಿಸಿತು. ಆಗ, ಆ, ವಿರಾಟಪುರುಷನು ವಾಗೀಂದ್ರಿಯ ದ್ವಾರ ಕಬಳಿಸಲು ಇಚ್ಛಿಸಿದನು. ಆದರೆ ವಾಗೀಂದ್ರಿಯ ದ್ವಾರ ಕಬಳಿಸಲು ಸಾಧ್ಯವಾಗಲಿಲ್ಲ. ಏಕೆಂದರೆ! ವಾಣಿ ಮಾತ್ರದಿಂದಲೆ ಗ್ರಹಿಸಲು ಸಾಧ್ಯವಾಗುತ್ತಿದ್ದರೆ ಎಲ್ಲಾ ಜೀವರು ವಾಣಿಯಿಂದ ಅನ್ನ ಎಂದು ಹೇಳುವುದರಿಂದಲೆ ತೃಪ್ತರಾಗುತ್ತಿದ್ದರು.

ತತ್ಪ್ರಾಣೇನಾಜಿಘೃಕ್ಷತ್ತನ್ನಾಶಕ್ನೋತ್ಪ್ರಾಣೇನ ಗ್ರಹಿತುಂ ಸ ಯುದ್ಧೈನತ್ಪ್ರಾಣೇನಾಗ್ರಹೈಷ್ಯದಭಿ ಪ್ರಾಣ್ಯಹೈವಾನ್ನ ಮತ್ರಪ್ಸ್ಯತ್ ॥ ೪ ॥

ಆಗ, ಅಧಿಪುರುಷನು, ಆ, ಅನ್ನವನ್ನು ಪ್ರಾಣದಿಂದ ಗ್ರಹಿಸಲು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಏಕೆಂದರೆ! ಪ್ರಾಣದಿಂದ ಅನ್ನದ ಗ್ರಹಣವಾಗುತ್ತಿದ್ದರೆ ಎಲ್ಲರು ಅನ್ನದ ಉದ್ದೇಶದಿಂದ ಪ್ರಾಣಕ್ರಿಯೆ ನಡೆಸಿ ತೃಪ್ತರಾಗುತ್ತಿದ್ದರು.

ತಚ್ಚಕ್ಷುಷಾ ಜಿಘೃಕ್ಷತ್ತನ್ನಾಶಕ್ನೋಚ್ಚಕ್ಷುಷಾ ಗ್ರಹಿತುಂ ಸ ಯುದ್ಧೈನಚ್ಚಕ್ಷುಷಾ ಗ್ರಹೈಷ್ಯದ್ ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥ ೫ ॥

ಆಗ ಅವನು ನೇತ್ರದಿಂದ ತಿನ್ನಲುಪಕ್ರಮಿಸಿದನು. ಆದರೆ ಅದು ಆಗಲಿಲ್ಲ. ಏಕೆಂದರೆ! ಯಾವಾಗ ಅನ್ನವನ್ನು ನೇತ್ರದ ದ್ವಾರ ಗ್ರಹಣ

ಮಾಡಲು ಸಾಧ್ಯವಾಗಿದ್ದರೆ ಈಗಾಗಲೇ ಎಷ್ಟೋ ಜನರು ಅನ್ನವನ್ನು ನೋಡುವ ಮಾತ್ರದಿಂದಲೇ ತೃಪ್ತರಾಗುತ್ತಿದ್ದರು. ಆದರೆ ಇದುವರಿವಿಗೂ ಹಾಗೆ ಯಾರು ಅನ್ನವನ್ನು ನೋಡಿ ತೃಪ್ತರಾಗಲಿಲ್ಲ.

ತಚ್ಛ್ರೋತ್ರೇಣಾಜಿಘೃಕ್ಷತ್ತನ್ನಾಶಕ್ನೋಚ್ಛ್ರೋತ್ರೇಣ ಗ್ರಹಿತುಂ ಸ ಯದ್ಧೈನಚ್ಛ್ರೋತ್ರೇಣಾಗ್ರ ಹೈಷ್ಯಚ್ಛ್ರುತ್ವಾ ಹೈವಾನ್ನಮತ್ರಪ್ಸ್ಯತ್ ‖ ೬ ‖

ಅವನು ಆ ಅನ್ನವನ್ನು ಕಿವಿಯಿಂದ ತಿನ್ನಲು ಯತ್ನಿಸಿದನು. ಅದು ಸಾಧ್ಯವಾಗದೆ ಹೋಯಿತು. ಏಕೆಂದರೆ! ಕಿವಿಯಿಂದ ಅನ್ನ ತಿನ್ನಲು ಸಾಧ್ಯ ವಾಗುತ್ತಿದ್ದರೆ ಈಗ ಎಲ್ಲರೂ ಅನ್ನದ ವಿಷಯವನ್ನು ಕೇಳುವ ಮಾತ್ರದಿಂದಲೆ ತೃಪ್ತರಾಗುತ್ತಿದ್ದರು.

ತತ್ವಚಾಜಿಘೃಕ್ಷತ್ತನ್ನಾಶಕ್ನೋತ್ವಚಾ ಗ್ರಹಿತುಂ । ಸ ಯ ದ್ಧೈನ ತ್ವಚಾ ಗ್ರಹೈಷ್ಯತತ್ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ‖ ೭ ‖

ಆಗ ಅವನು ತ್ವಗೀಂದ್ರಿಯ ದ್ವಾರ ಹಿಡಿಯಲುಪಕ್ರಮಿಸಿದ. ಅದು ಸಾಧ್ಯವಾಗಲಿಲ್ಲ. ಏಕೆಂದರೆ! ತ್ವಗೀಂದ್ರಿಯದಿಂದ ಗ್ರಹಣವಾಗುತ್ತಿದ್ದರೆ ಎಲ್ಲರಿಗೂ ಅನ್ನದ ಸ್ಪರ್ಶಮಾತ್ರದಿಂದಲೆ ತೃಪ್ತರಾಗಬಹುದಾಗಿತ್ತು. ಹಾಗೆ ಯಾರ ಅನುಭವದಲ್ಲೂ ಇಲ್ಲ.

ತನ್ಮನಸಾ ಜಿಘೃಕ್ಷತ್ತನ್ನಾಶಕ್ನೋನ್ಮನಸಾ ಗ್ರಹಿತುಂ ಸ ಯದ್ಧೈನನ್ಮ ನಸಾಗ್ರಹೈಷ್ಯದ್ಧ್ಯಾತ್ವಾ ಹೈವಾನ್ನ ಮತ್ರಪ್ಸ್ಯತ ‖ ೮ ‖

ಅವನು, ಅನ್ನವನ್ನು ಮನದಿಂದ ಗ್ರಹಿಸಲು ಇಚ್ಛಿಸಿದನು. ಅದು ಸಾಧ್ಯವಾಗಲಿಲ್ಲ. ಏಕೆಂದರೆ! ಮನಸ್ಸಿನಿಂದ ಗ್ರಹಣಮಾಡಲು ಸಾಧ್ಯವಾಗಿ ದ್ದರೆ ಎಲ್ಲರೂ ಅನ್ನದ ಧ್ಯಾನ ಮಾತ್ರದಿಂದಲೆ ತೃಪ್ತರಾಗುತ್ತಿದ್ದರು.

ತಚ್ಛಿಶ್ನೇನಾ ಜಿಘೃಕ್ಷತ್ತನ್ನಾ ಶಕ್ನೋಚ್ಛಿಶ್ನೇನ ಗ್ರಹಿತುಂ । ಸಯದ್ಧೈನ ಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯಹೈವಾನ್ನ ಮತ್ರಪ್ಸ್ಯತ್ ‖ ೯ ‖

ಆಗ ಅವನು ಉಪಸ್ಥೇಂದ್ರಿಯದಿಂದ ಅನ್ನವನ್ನು ಭಕ್ಷಿಸಲು ಪ್ರಯತ್ನಿಸಿದನು. ಅದು ಸಾಧ್ಯವಾಗಲಿಲ್ಲ. ಏಕೆಂದರೆ! ಶಿಶ್ನದಿಂದ ಅನ್ನ ಗ್ರಹಿಸಲು ಸಾಧ್ಯವಾಗಿದ್ದರೆ ಈಗ ಎಲ್ಲರೂ ಅನ್ನದ ವಿಸರ್ಜನಾ ಮಾತ್ರದಿಂದಲೆ ತೃಪ್ತರಾಗುತ್ತಿದ್ದರು.

ತದ ಪಾನೇನ ಜಿಘೃಕ್ಷತ್ತದಾವಯತ್ ಸೈಷೋಽನ್ನಸ್ಯಗ್ರಹೋಯದ್ವಾಯುರನ್ನಾಯುರ್ವಾ ಏಷ ಯದ್ವಾಯುಃ ॥ ೧೦ ॥

ನಂತರ ಅನ್ನವನ್ನು ಅಪಾನದ ದ್ವಾರಗ್ರಹಣಮಾಡಲು ಇಚ್ಛಿಸಿದನು. ಆಗ ಅಪಾನದ್ವಾರ ಅನ್ನವನ್ನು ಗ್ರಹಿಸಲು ಸಾಧ್ಯವಾಯಿತು. ಇಲ್ಲಿ ಅಪಾನವೆಂದರೆ—ಮುಖಛಿದ್ರ (ಬಾಯಿ) ವೆಂದು ತಿಳಿಯಬೇಕು. ಈ ಕಾರಣದಿಂದಲೇ ಅಪಾನವಾಯು ಅನ್ನಗ್ರಹಣಮಾಡಲು ಸಮರ್ಥವಾಗಿದೆಯೆಂದು ಸಮರ್ಥಿಸಲ್ಪಟ್ಟಿತು. ಅಪಾನವಾಯುವನ್ನೇ ಅನ್ನಾಯುವೆಂತಲೂ ಹೇಳಲ್ಪಡುತ್ತೆ.

## ಶರೀರದೊಳು ಪರಮಾತ್ಮನ ಪ್ರವೇಶದ ವಿಚಾರ

ಸ ಈಕ್ಷತ ಕಥಂನ್ವಿದಂ ಮದೃತೆ ಸ್ಯಾದಿತಿ ಸ ಈಕ್ಷತ ಕತರೇಣ ಪ್ರಪದ್ಯಾ ಇತಿ ಸ ಈಕ್ಷತ ಯದಿವಾಚಾಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾಣಿತಂ ! ಯದಿ ಚಕ್ಷುಷಾದೃಷ್ಟಂ ಯದಿ ಶ್ರೋತ್ರೇಣ ಶ್ರುತಂ ಯದಿತ್ವಚಾ ಸ್ಪೃಷ್ಟಂ ಯದಿಮನಸಾಧ್ಯಾತಂ ಯದ್ಯಪಾನೇನಾಭ್ಯಪಾನಿತಂ ಯದಿ ಶಿಶ್ನೇನ ವಿಸೃಷ್ಟಮಥ ಕೋಽಹಮಿತಿ ॥ ೧೧ ॥

ಆ ಪರಮೇಶ್ವರನು ವಿಚಾರಮಾಡಿದನು. ಈ ಪಿಂಡ (ಶರೀರ)ವು ನನ್ನ ವಿನಃ ಹೇಗೆ ತಾನೆ ಉಳಿದಿತು ? ಎಂದು ಯೋಚಿಸತೊಡಗಿದನು. ಈಗ ನಾನು ಈ ಶರೀರದಲ್ಲಿ ಯಾವ ಮಾರ್ಗದಿಂದ ಪ್ರವೇಶಿಸಲಿ ? ಏಕೆಂದರೆ! ನನ್ನ ವಿನಃ ವಾಣಿಯು ಹೇಗೆ ಉಚ್ಚರಿಸುತ್ತೆ? ಪ್ರಾಣ ತಾನೆ ಶ್ವಾಸನಿಶ್ವಾಸಗಳ ಕ್ರಿಯೆ ಹೇಗೆ ಮಾಡುತ್ತೆ? ನೇತ್ರೇಂದ್ರಿಯವು ಹೇಗೆ ನೋಡುವ ಕೆಲಸಮಾಡುತ್ತೆ? ಶ್ರೋತ್ರೇಂದ್ರಿಯಗಳು ಹೇಗೆ ಕೇಳುವ ಕೆಲಸವನ್ನು ಮಾಡುತ್ತೆ? ತ್ವಗೀಂದ್ರಿಯವು ಸ್ಪರ್ಶ ಕ್ರಿಯೆ ಹೇಗೆ ಮಾಡುತ್ತೆ? ಮನಸ್ಸು ತಾನೆ ಹೇಗೆ ಚಿಂತಿಸುತ್ತೆ?

ಅಪಾನವು ಭಕ್ಷಣಾದಿಕ್ರಿಯೆ ಹೇಗೆ ಮಾಡುತ್ತಿ? ಶಿಶ್ನ ಹೇಗೆ ವಿಸರ್ಜಿಸುತ್ತಿ? ಅಂದರೆ ನನ್ನ ವಿನಃ ಇವುಗಳು ತಮ್ಮ ವ್ಯಾಪಾರ ಮಾಡುವುದಾದರೆ ನನ್ನ ಪ್ರವೇಶಕ್ಕೆ ಪ್ರಯೋಜನವೆ ಇರುತ್ತಿರಲಿಲ್ಲ. ನನ್ನ ಪ್ರೇರಣೆಯಿಂದಲೆ ಇವು ತಮ್ಮ ವ್ಯಾಪಾರವನ್ನು ಮಾಡುತ್ತವೆ. ಆದ್ದರಿಂದ ನಾನು ಪ್ರವೇಶಿಸುತ್ತೆನೆಂದು ಸಂಕಲ್ಪಿಸಿದನು.

### ಶಿರೋಗ್ರಭಾಗದಿಂದ ಶರೀರ ಪ್ರವೇಶದ ವಿಚಾರ

ಸ ಏತಮೇವ ಸೀಮಾನಂ ವಿದಾರ್ಯೈತಯಾದ್ವಾರಾ ಪ್ರಾಪದ್ಯತ। ಸೈಷಾ ವಿದ್ಧೃತಿರ್ನಾಮ ದ್ವಾಸ್ತದೇತನ್ನಾನ್ದನಮ್ । ತಸ್ಯತ್ರಯ ಆವಸಥಾ ಸ್ತ್ರಯಃ ಸ್ವಪ್ನ ಅಯಮಾವ ಸಥೋಽಯಮಾವಸಥೋಽಯಮಾವಸಥ ಇತಿ ॥ ೧೨ ॥

ಆಗ ಪರಮಾತ್ಮನು ಸೀಮಾವನ್ನು (ಶಿರೋಗ್ರಭಾಗ) ವಿದೀರ್ಣಮಾಡಿ (ಸೀಳಿ) ಶರೀರದೊಳಗೆ ಜೀವ ರೂಪದಿಂದ ಪ್ರವೇಶಿಸಿದನು. ವಿದೀರ್ಣಮಾಡಿ ರುವುವರಿಂದ ಈ ದ್ವಾರಕ್ಕೆ ವಿದೃತಿಯೆಂಬ ಹೆಸರುಬಂದಿರುತ್ತೆ. ಮತ್ತು ಈ ದ್ವಾರವು ಆನಂದಪ್ರದವಾಗಿರುತ್ತೆ. ಇತರ ದ್ವಾರಗಳು ಅಂದರೆ ನೇತ್ರ-ಕಂಠ ಹೃದಯಗಳು ಸಾಮಾನ್ಯದ್ವಾರಗಳು. ಭೃತ್ಯರು ಓಡಾಡುವ ದ್ವಾರಗಳು. ಆದ್ದರಿಂದ ಅವು ಆನಂದಪ್ರದವಾದವುಗಳು ಅಲ್ಲ. ಇಲ್ಲಿ ನೇತ್ರ ಕಂಠ ಹೃದಯವನ್ನು ಅವಸಥ ಶಬ್ದದಿಂದ ಕರೆದಿರುತ್ತೆ. ಅವಸಥ ಎಂದರೆ ವಾಸಸ್ಥಾನವೆಂದರಿಯಬೇಕು. ನೇತ್ರ ಜಾಗ್ರದವಸ್ತ ಎಂತಲೂ ಕಂಠವು ಸ್ವಪ್ನಸ್ಥಾನವೆಂತಲೂ ಹೃದಯವನ್ನು ಸುಷುಪ್ತಿ ಸ್ಥಾನವೆಂತಲೂ ಕರೆಯುತ್ತಾರೆ. ಈ ಮೂರು ಅವಸ್ಥೆ ಜೀವನಿಗೆ ಸಮಾನವಾಗಿಯೆ ಇದೆ ಎಂದರಿಯಬೇಕು.

### ಜೀವಮೋಹ ಮತ್ತು ಅದರ ನಿವೃತ್ತಿ

ಸ ಜಾತೋ ಭೂತಾನ್ಯಭಿ ವ್ಯೈಖ್ಯಾತ ಕಿಮಿಹಾನ್ಯಂ ವಾವದಿಷದಿತಿ। ಸ ಏತಮೇವ ಪುರುಷಂ ಬ್ರಹ್ಮ ತತಮಮ ಪಶ್ಯತ್ । ಇದಮದರ್ಶ ಮಿತಿ೩ೀ ॥ ೧೩ ॥

ಪರಮೇಶ್ವರನು ಜೀವರೂಪದಿಂದ ಶರೀರದಲ್ಲಿ ಪ್ರವೇಶಿಸಿದನು. ನಂತರ ಆ ಶರೀರದೊಡನೆ ಒಂದಾದನು (ಆಗಲೆ ಜೀವನಿಗೆ ನಾನಾ ದುಃಖಗಳು ಸಂಭವಿಸುವುದು). ತದನಂತರ ಪರಮ ಕಾರುಣಿಕನಾದ ಸದ್ಗುರುವನ್ನು ಸೇರಿದನು. ಆಗ ಅವನು ನೀನೆ ಆ ಬ್ರಹ್ಮವೆಂದು ಕರ್ಣೋಪದೇಶಮಾಡಿದನು (ಆಗ ಅವನಿಗೆ ದೇಹಾತ್ಮಮೋಹ ಅಡಗುತ್ತೆ). ನಂತರ ಜೀವಾತ್ಮನು ನನ್ನ ವಿನಃ ಅನ್ಯರು ಯಾರು ಇರುವರು ಎಂದು ತಿಳಿದನು. ನಾನು ನನ್ನ ಆತ್ಮ ಸ್ವರೂಪವನ್ನು ಪರಿಪೂರ್ಣ ಬ್ರಹ್ಮರೂಪವಾಗಿ ತಿಳಿದೆನು ಎಂದರಿತನು.

### ಇನ್ದ್ರ ಶಬ್ದದ ವ್ಯುತ್ಪತ್ತಿ

ತಸ್ಮಾದಿದನ್ದ್ರೋ ನಾಮೇದನ್ದ್ರೋ ಹ, ವೈ, ನಾಮ। ತಮಿದನ್ದ್ರಂ ಸನ್ತಮಿನ್ದ್ರ ಇತ್ಯಾಚಕ್ಷತೇ ಪರೋಕ್ಷೇಣ। ಪರೋಕ್ಷಪ್ರಿಯಾ ಇವ, ಹಿ, ದೇವಾಃ ಪರೋಕ್ಷಪ್ರಿಯಾ ಇವ, ಹಿ, ದೇವಾಃ ॥ ೧೪ ॥

ಇದಕ್ಕಾಗಿಯೆ, ಆ, ಪರಮಾತ್ಮನ ಹೆಸರು ಇದಂದ್ರವೆಂದಾಯಿತು. ಅವನು ಇದಂದ್ರನಾಮದಿಂದ ಪ್ರಸಿದ್ಧನಾಗಿದ್ದಾನೆ. ಇವನು "ಇದಂದ್ರ" ನಾಗಿದ್ದರೂ ಬ್ರಹ್ಮವೇತ್ತರು ಪರೋಕ್ಷರೂಪದಿಂದ ಇಂದ್ರನೆಂದು ಕೂಗುತ್ತಾರೆ. ಏಕೆಂದರೆ! ದೇವಗಣವೆಲ್ಲವು ಪರೋಕ್ಷಪ್ರಿಯರೆ ಆಗಿರುತ್ತಾರೆ. ದೇವತೆಗಳು ಪರೋಕ್ಷಪ್ರಿಯರೇ ಆಗುತ್ತಾರೆ. ಇದಂದ್ರವೆಂದರೇನು? ದೃಶ್ಯವಾದೀ ನಾಮರೂಪಾತ್ಮಕ ಜಗತ್ತನ್ನು ನೋಡುವವನು ಯಾರೋ ಅವನು ಇದಂದ್ರನು. ಲೋಕದಲ್ಲಿಯೂ ಕೂಡ ಇದಂದ್ರ ನಾಮದಿಂದ ಈಶ್ವರನು ಪ್ರಸಿದ್ಧನಾಗಿದ್ದಾನೆ. ಪೂಜ್ಯತಮನಾಗಿರುವುದರಿಂದ ಇಂದ್ರನೆಂತಲೂ ಕರೆಯುತ್ತಾರೆ.

# ದ್ವಿತೀಯ ಅಧ್ಯಾಯ

### ಎಲ್ಲಾ ಜೀವಿಗಳ ಮೊದಲು ಪುರುಷನ ಜನ್ಮ—ಎಂಬ ವಿಚಾರ

ಪುರುಷೆ, ಹ, ವಾ, ಅಯಮಾದಿತೋಗರ್ಭೋ ಭವತಿ । ಯದೇತದ್ರೇತಃ ತದೇತತ್ಸರ್ವೇಭ್ಯೋಽಙ್ಗೇಭ್ಯಸ್ತೇಜಃ । ಸಂಭೂತಮಾತ್ಮನ್ಯೇವಾತ್ಮಾ

ನಂಭಿಭರ್ತಿ । ತದ್ಯದಾಸ್ತ್ರಿಯಾಂ ಸಿಞ್ಚತ್ಯಥೈನಜ್ಜನಯತಿ ತದಸ್ಯ ಪ್ರಥಮಂ ಜನ್ಮ ॥ ೧ ॥

ಎಲ್ಲರಿಗೂ ಮೊದಲು ಜೀವನು ಪುರುಷ ಶರೀರದಲ್ಲಿ ಗರ್ಭರೂಪದಿಂದಿರುತ್ತಾನೆ. ಈ ಜೀವನು ರೇತ (ವೀರ್ಯ) ರೂಪನೆಂದು ಪ್ರಸಿದ್ಧವಾಗಿರುತ್ತೆ. ಏಕೆಂದರೆ? ಪುರುಷನ ಎಲ್ಲಾ ಅಂಗಗಳಿಂದ ಉತ್ಪನ್ನವಾದ ತೇಜವಾಗಿದೆ (ಸಾರವಾಗಿದೆ). ಪುರುಷನು ಈ ಆತ್ಮಭೂತತೇಜವನ್ನು ತನ್ನ ಶರೀರದಲ್ಲೇ ಇರಿಸಿ ಪೋಷಿಸುತ್ತಾನೆ. ಯಾವಾಗ ಈ ತೇಜಸನ್ನು ಸ್ತ್ರೀಯಲ್ಲಿ ಇರಿಸುತ್ತಾನೋ ಆವಾಗ ಇದು ಗರ್ಭರೂಪದಿಂದ ಉತ್ಪತ್ತಿಯಾಗುತ್ತೆ. ತದನಂತರ ಆ ಗರ್ಭದಿಂದ ಮನುಷ್ಯನ ಜನ್ಮವಾಗುತ್ತೆ.

ತತ್‌ಸ್ತ್ರೀಯಾ ಆತ್ಮಭೂತಂಗಚ್ಛತಿ । ಯಥಾ ಸ್ವಮಂಗಂ ತಥಾ । ತಸ್ಮಾದೇನಾಂ ನ ಹಿನಸ್ತಿ । ಸಾಸ್ಯೈತಮಾತ್ಮಾನಮತ್ರಗತಂಭಾವಯತಿ ॥ ೨ ॥

ಹೇಗೆ ಸ್ತ್ರೀಯರಿಗೆ ಸ್ತನಾದಿಗಳು ತನ್ನ ಅಂಗವಾಗಿರುತ್ತೋ ಹಾಗೆಯೆ ಪುರುಷನ ವೀರ್ಯವು ಸ್ತ್ರೀಯ ಆತ್ಮಭಾವವಾಗಿ (ತಾದಾತ್ಮ್ಯಭಾವ) ಆಗಿ ಸ್ತ್ರೀಯಲ್ಲಿರುತ್ತೆ. ಅಂದರೆ ಸ್ತ್ರೀಗೆ ಯಾವ ವಿಧವಾದ ತೊಂದರೆಯಾಗುವುದಿಲ್ಲ. ಸ್ತ್ರೀಯು ತನ್ನಲ್ಲಿರಿಸಿಸಲ್ಪಟ್ಟ ತನ್ನ ಪತಿಯ ಆತ್ಮದ (ವೀರ್ಯದ) ಪೋಷಣೆ ಮಾಡುತ್ತಾಳೆ.

## ಪುರುಷನ ಎರಡನೆ ಜನ್ಮ

ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ । ತಂ ಸ್ತ್ರೀ ಗರ್ಭಂ ಬಿಭರ್ತಿ । ಸೋಽಗ್ರ ಏವ ಕುಮಾರಂ ಜನ್ಮನೋಽಗ್ರೇಽಧಿ ಭಾವಯತಿ । ಸ ಯತ್ಕುಮಾರಂ ಜನ್ಮನೋಽಗ್ರೇಽಧಿ ಭಾವ ಯತ್ಯಾತ್ಮಾನಮೇವ ತದ್ಭಾಯತ್ಯೇಷಾಂ ಲೋಕಾನಾಂ ಸಂತತ್ಯಾ । ಏವಂ ಸಂತತಾ ಹೀಮೆಲೋಕಾಸ್ತದಸ್ಯದ್ವಿತೀಯಂ ಜನ್ಮ ॥ ೩ ॥

ಪತಿಯ ಆತ್ಮರೂಪದ ಪಾಲನೆ ಮಾಡುವ ಗರ್ಭಿಣಿ ಸ್ತ್ರೀಯು ತನ್ನ ಪತಿಯ ದ್ವಾರ (ಗರ್ಭವನ್ನು) ತಾನು ಪಾಲನೀಯಳಾಗುತ್ತಾಳೆ. ಗರ್ಭಿಣಿ

ಸ್ತ್ರೀ ಗರ್ಭದ ಪೋಷಣೆ ಮಾಡುತ್ತಾಳಷ್ಟೆ, ಅದರಂತೆ ಪುರುಷನು (ತಂದೆ) ಗರ್ಭದಿಂದ ಹೊರಬಂದ ಆ ಕುಮಾರನಿಗೆ ಜಾತಕರ್ಮಾದಿಗಳ ದ್ವಾರ ಸಂಸ್ಕೃತನನ್ನಾಗಿ ಮಾಡುತ್ತಾನೆ. ಜನ್ಮಾನಂತರ ಕುಮಾರನ ಸಂಸ್ಕಾರಮಾಡಿದ ತಂದೆಯು ತನ್ನ ಸಂಸ್ಕಾರವೇ ಮಾಡಿಕೊಂಡಂತೆ ಅರ್ಥವಾಗುತ್ತೆ. ಏಕೆಂದರೆ! ಪಿತನ ಆತ್ಮವೆ ಪುತ್ರನಾಗಿರುತ್ತಾನೆ. "ಪತಿರ್ಜಾಯಾಂ ಪ್ರವಿಶತಿ" ಪತಿಯೇ ಪತ್ನಿಯಲ್ಲಿ ಪುತ್ರನಾಗಿ ಪ್ರವೇಶಿಸುತ್ತಾನೆಂದು ತಿಳಿದು ಬರುತ್ತೆ. ಪುತ್ರೋತ್ಪಾದನಾದಿ ಕರ್ಮಗಳನ್ನು ನಾಶಮಾಡಬಾರದು. ಹಾಗೆ ನಾಶವಾಗದಿರೋಣದ್ದರಿಂದಲೇ ಈ ಲೋಕವು ವೃದ್ಧಿಹೊಂದಿದೆ. ಪ್ರವಾಹರೂಪವಾಗಿ ನಡೆದುಬರುತ್ತಿದೆ. ಹೀಗೆ ಪೂರ್ವೋಕ್ತ ಪ್ರಕಾರದಿಂದ ಮನುಷ್ಯನ ಎರಡನೆ ಜನ್ಮವೆಂದು ಹೇಳಬಹುದು. ಶಾಸ್ತ್ರದಲ್ಲೂ ಪುರುಷನಿಗೆ ಎರಡನೆ ಜನ್ಮವೆಂದು ಹೇಳುತ್ತಾರೆ.

### ಪುರುಷನ ಮೂರನೆ ಜನ್ಮ

ಸೋಽಸ್ಯಾಯಮಾತ್ಮಾಪುಣ್ಯೇಭ್ಯಃ ಪ್ರತಿಧೀಯತೇ । ಅಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ ॥ ಸ ಇತಃ ಪ್ರಯನ್ನೇವ ಪುನರ್ಜಾಯತೇ ತದಸ್ಯ ತೃತೀಯಂ ಜನ್ಮ ॥ ೪ ॥

ಈ ತಂದೆಯ ಪುತ್ರರೂಪ ಆತ್ಮನು ಪುಣ್ಯಕರ್ಮಗಳ ಅನುಷ್ಠಾನಕ್ಕಾಗಿ ತನ್ನ ತಂದೆಗೆ ಪ್ರತಿನಿಧಿರೂಪದಿಂದ ತಂದೆಯ ಸ್ಥಾನದಲ್ಲಿರಿಸಲ್ಪಡುತ್ತಾನೆ. ಆಗ ತಂದೆ ರೂಪ ಆತ್ಮ ತನ್ನ ಸ್ಥಾನದಿಂದ ನಿವೃತ್ತನಾಗುತ್ತಾನೆ. ಅಂದರೆ ಮಗನು ವಯಸ್ಕನಾದಮೇಲೆ ತಾನು ತಿಳಿದಿದ್ದ ಆತ್ಮ ವಿದ್ಯವೆಲ್ಲ ಮಗನಿಗೆ ತಿಳಿಸಿ, ತನ್ನ ಭೋಗ ಭಾಗ್ಯವೆಲ್ಲ ಅವನಿಗೆ ಕೊಟ್ಟು, ಈಗ ನಾನು ಕೃತಕೃತ್ಯನೆಂದರಿಯುತ್ತಾನೆ. ವೃದ್ಧನಾಗಿ ವನಕ್ಕೆ ಹೋಗುತ್ತಾನೆ. ನಂತರ ಕರ್ಮಗಳ ಫಲವನ್ನು ಅನುಭವಿಸಲು ಪುನಃ ಜನ್ಮ ತಾಳುತ್ತಾನೆ. ಇದೇ ಪುರುಷನ ಮೂರನೆ ಜನ್ಮವಾಗಿದೆ.

### ವಾಮದೇವನ ಸ್ಮರಣಾನುಭವ

ತದುಕ್ತಮೃಷಿಣಾ–ಗರ್ಭೇ ನು ಸನ್ನನ್ವೇಷಾಮ ವೇದಮಹಂ ದೇವಾನಾಂ ಜನಿಮಾನಿ ವಿಶ್ವಾ । ಶತಂ ಮಾ ಪುರ ಆಯಸೀರಪಕ್ಷನ್ನಧಃ ಶ್ಯೇನೋ

ಜವಸಾ ನಿರದೀಯಮಿತಿ । ಗರ್ಭ ಏವೈತಚ್ಛಯಾನೋ ವಾಮದೇವ ಏವ ಮುವಾ ಚ ॥ ೫ ॥

ಈ ಮಾತು ವಾಮದೇವ ಋಷಿಯು ಸಹ ಹೇಳಿರುತ್ತಾನೆ. ನಾನು ಗರ್ಭದಲ್ಲಿರುತ್ತಿದ್ದರೂ ಈ ದೇವತೆಗಳ ಎಲ್ಲಾ ಜನ್ಮಗಳನ್ನು ತಿಳಿದುಕೊಂಡಿರುತ್ತೇನೆ. ಜ್ಞಾನ ಆಗುವುದಕ್ಕೆ ಮೊದಲು ಉಕ್ಕಿನ ಸಮಾನವಾದ ಸಾವಿರಾರು ಶರೀರಗಳಿಂದ ನಾನು ಬಂಧಿಸಲ್ಪಟ್ಟಿದ್ದೆ. ಈಗ ತತ್ವಜ್ಞಾನದ ಪ್ರಭಾವದಿಂದ "ಶ್ಯೇನ (ಗಿಡುಗ) ಪಕ್ಷಿಯಂತೆ" ನಾನು ಅವುಗಳನ್ನು ಭೇದಿಸಿ ಹೊರ ಬಂದಿರುತ್ತೇನೆ. ವಾಮದೇವನು ಗರ್ಭದಲ್ಲಿದ್ದಾಗಲೆ ಈ ಮಾತು ಹೇಳಿದ್ದನು.

### ವಾಮದೇವನ ಗತಿ ವಿಚಾರ

ಸ ಏವಂ ವಿದ್ವಾನಸ್ಮಾಚ್ಛರೀರ ಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ತ್ಸ್ವರ್ಗೆ ಲೋಕೇ ಸರ್ವಾ‌ನ್ ಕಾಮಾನಾಪ್ತ್ವಾ ಮೃತಃ ಸಮಭವತ್ಸಮಭವತ್ ॥ ೬ ॥

ವಾಮದೇವ ಋಷಿ ಪೂರ್ವೋಕ್ತ ಆತ್ಮಜ್ಞಾನವನ್ನು ಪಡೆದು ತನ್ನ ಶರೀರವು ನಾಶವಾದನಂತರ ಸ್ವರ್ಗಲೋಕದಲ್ಲಿ ಸಂಪೂರ್ಣಭೋಗವನ್ನು ಪಡೆದು ಅಮರನಾಗಿ ಹೋದನು. ಅಂದರೆ ಆತ್ಮಜ್ಞಾನವಾದನಂತರ ಶರೀರೋತ್ಪತ್ತಿಗೆ ಬೀಜಭೂತವಾದ ಅವಿದ್ಯೆಯನ್ನು ಕಳೆದುಕೊಂಡನು. ಅದರ ಫಲವಾಗಿ ಅಜರ ಅಮರ ಅಮೃತ ಅಭಯತ್ವವನ್ನು ಪಡೆದನು. ಇಂದ್ರಿಯಗಳಿಗೆ ಅಗೋಚರವಾದ ಆತ್ಮೀಯ ಸುಖವನ್ನು ಸದಾ ಅನುಭವಿಸುತ್ತಿರುವನು. ಶ್ರೇಷ್ಠತಮನಾಗಿ ಆಗಿಹೋದನು. ಜಗತ್ತಿನ ಜ್ಯೋತಿ ರೂಪದಲ್ಲಿ ಬೆಳಗಲುಪಕ್ರಮಿಸಿದನು. ಅದ್ಯಾಪಿ ಎಲ್ಲಾ ಜೀವರ ನೆನಕೆಯ ನಕ್ಷತ್ರವಾಗಿರುವನು.

## ತೃತೀಯ ಅಧ್ಯಾಯ

### ಆತ್ಮ ವಿಷಯಕ ಪ್ರಶ್ನೆ

ಕೋಽಯ ಮಾತ್ಮೇತಿ ವಯಮುಪಾಸ್ಮಹೆ । ಕತರಃ ಸ ಆತ್ಮಾಯೇನ ವಾ ಪಶ್ಯತಿ ಯೇನ ವಾ । ಶೃಣೋತಿ ಯೇನ, ವಾ, ಗಂಧಾನಾಜಿಘ್ನತಿ । ವಾಚಂ ವ್ಯಾಕರೋತಿ ಯೇನ ವಾ, ಸ್ವಾದುಚಾ ಸ್ವಾದುಚ ವಿಜಾನಾತಿ ॥ ೧ ॥

ನಾವು ಉಪಾಸನೆ ಮಾಡುವ ಆತ್ಮನು ಯಾರು? (ಅಂದರೆ ಅವನ ಸ್ವರೂಪವೇನು) ಯಾವುದರಿಂದ ಜೀವನು ನೋಡುತ್ತಾನೋ ಮತ್ತು ಕೇಳುತ್ತಾನೋ, ಗಂಧವನ್ನು ಮೂಸುತ್ತಾನೋ ಮತ್ತು ವಾಣಿಯಿಂದ ಮಾತನಾಡುತ್ತಾನೋ, ನಾಲಿಗೆಯಿಂದ ರುಚಿ-ಅರುಚಿಗಳನ್ನು ತಿಳಿಯುತ್ತಾನೋ— ಈ ಪೂರ್ವೋಕ್ತ ವಸ್ತುಗಳ ಪೈಕಿ ಆತ್ಮ ಯಾರು ? ಅವನ ಸ್ವರೂಪವೇನು ?

### ಪ್ರಜ್ಞಾನಾಮಕ ಮನದ ಅನೇಕ ಹೆಸರುಗಳು

ಯದೇತದ್ಧೃದಯಂ ಮನಶ್ಚೈತತ್ | ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋವಶ ಇತಿ ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವನ್ತಿ || ೨ ||

ಇಲ್ಲಿ ಯಾವ ಹೃದಯವೆಂದಿದೆಯೋ ಅದೇ ಮನಸ್ಸು ಕೂಡ ಆಗಿದೆ. ಸಂಜ್ಞಾನತಾ (ಚೇತನತಾ) ಅಜ್ಞಾನತಾ, ವಿಜ್ಞಾನ, ಪ್ರಜ್ಞಾನ, ಮೇಧ (ಗ್ರಂಥ ಧಾರಣ ಶಕ್ತಿ) ದೃಷ್ಟಿ (ನೋಡುವಿಕೆ) ಧೃತಿ, ಮತಿ (ಮನನಶಕ್ತಿ) ಜೂತಿ (ಚಿತ್ತದಲ್ಲುದಿಸುವ ರೋಗಾದಿಗಳ ಜ್ಞಾನ) ಸ್ಮರಣೆ, ಸಂಕಲ್ಪ, ಕ್ರತು (ನಿಶ್ಚಯಾತ್ಮಕ ಶಕ್ತಿ, ಪ್ರಾಣಶಕ್ತಿ, ಆಶಾ, ಇಚ್ಛಾ--ಇವುಗಳೆಲ್ಲವು ಪ್ರಜ್ಞಾನದ ಹೆಸರುಗಳು ಆಗಿವೆ. ಆದರೆ ನಾಮಮಾತ್ರದಿಂದ ಪ್ರಜ್ಞಾನದ ರೂಪದಲ್ಲಿ ಕರೆಯಲ್ಪಡುತ್ತಿವೆ. ನಿಜವಾಗಿಯೂ ಪ್ರಜ್ಞಾನ ಸ್ವರೂಪು ಅಲ್ಲ ಸಾಕ್ಷಾತ್ ಪ್ರಜ್ಞಾನವಲ್ಲವೆಂದು ತಿಳಿಯಬೇಕು).

### ಪ್ರಜ್ಞಾನದ ನಾಮ ಮತ್ತು ರೂಪುಗಳ ವಿವರಣೆ

ಏಷ ಬ್ರಹ್ಮೈಷ ಇನ್ದ್ರ ಏಷ ಪ್ರಜಾಪತಿರೇತೆ ಸರ್ವೇದೇವಾ ಇಮಾನಿ ಚ ಪಞ್ಚಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನಿತರಾಣಿ ಚೇತರಾಣಿ ಚಾಣ್ಡಜಾನಿಚ ಜಾರುಜಾನಿಚ ಸ್ವೇದಜಾನಿ, ಚೋದ್ಭಿಜಾನಿ, ಚಾಶ್ವಾಗಾವಃ ಪುರುಷಾ ಹಸ್ತಿನೋಯತ್ಕಿಂಚೇದಂ ಪ್ರಾಣಿಜಙ್ಗಮಂ ಚ ಪತತ್ರಿ ಚ ಯಚ್ಚ

ಸ್ಥಾವರಂ ಸರ್ವಂ ತತ್ಪ್ರಜ್ಞಾನೇತ್ರಮ್ । ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥ ೩ ॥

ಇಲ್ಲಿ ಮಾತ್ರ ಪ್ರಜ್ಞಾರೂಪ ಆತ್ಮವೇ ಬ್ರಹ್ಮವಾಗಿದೆ. ಈ ಪ್ರಜ್ಞಾನವೆ ಇಂದ್ರ, ಪ್ರಜಾಪತಿ ಮತ್ತು ಅಗ್ನಿ ಆದಿಯಾಗಿ ಎಲ್ಲಾ ದೇವತೆಗಳಾಗಿದೆ. ಈ ಪ್ರಜ್ಞಾನವೆ ಭೂಮಿ, ನೀರು, ಬೆಂಕಿ, ಗಾಳಿ ಬಯಲಾಗಿದೆ. ಅಂದರೆ ಪಂಚಭೂತ್ಮಕವಾಗಿದೆ. ಈ ಪ್ರಜ್ಞಾನವೆ ಕ್ಷುದ್ರಜೀವಿಗಳಾಗಿದೆ. ಅವುಗಳ ಬೀಜ ರೂಪ( ಕಾರಣವು) ವಾಗಿದೆ. ಮೊಟ್ಟೆ ಒಡೆದು ಹೊರಬರುವ ಪ್ರಾಣಿಗಳ ಸ್ವರೂಪವಾಗಿದೆ. ಜರಾಯು ಚರ್ಮದಿಂದ ಹೊರಬರುವ ಜೀವರಾಶಿಯಾಗಿದೆ. ಬೆವರಿನಿಂದ ಹುಟ್ಟುವ ಹುಳು ರೂಪವಾಗಿದೆ. ಬೀಜದಿಂದ ಬರುವ ಸ್ಥಾವರಾದಿಗಳು ಸಹ ಆಗಿದೆ. ಆನೆ, ಕುದುರೆ, ಹಸು, ಮನುಷ್ಯರಾದಿಯಾಗಿ ಎಲ್ಲಾ ಪ್ರಾಣಿಗಳ ಸಮೂದಾಯವು ಆಗಿದೆ. ಸ್ಥಾವರ ಮತ್ತು ಜಂಗಮರೂಪವಾಗಿದೆ. ಆಕಾಶದಲ್ಲಿ ಹಾರುವ ಪಕ್ಷಿವರ್ಗವೂ ಆಗಿದೆ. ಪ್ರಜ್ಞರೂಪ ನೇತ್ರವಾಗಿದೆ. ಪ್ರಜ್ಞಾನದಲ್ಲೆ (ನಿರುಪಾಧಿಕ ಚೈತನ್ಯದಲ್ಲೆ) ಸ್ಥಿತವಾಗಿದೆ. ಲೋಕವೆಲ್ಲ ಪ್ರಜ್ಞಾನದ ನೇತ್ರವಾಗಿದೆ. (ಲೋಕ ವ್ಯವಹಾರ ಕಾರಣ) ಪ್ರಜ್ಞಾನವೆ ಲಯಸ್ಥಾನವು ಆಗಿದೆ. ಆದ್ದರಿಂದ ಪ್ರಜ್ಞಾನವೇ ಬ್ರಹ್ಮವಾಗಿದೆ ಎಂದು ತಿಳಿಯಬೇಕು.

### ಆತ್ಮೈಕ್ಯವೇತ್ತನ ಫಲ

ಸ ಏತೇನ ಪ್ರಜ್ಞೆನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ಸಮ ಭವತ್ ॥ ೪ ॥

ವಾಮದೇವನು ಪ್ರಜ್ಞಾ ಸ್ವರೂಪದಿಂದಲೇ ಜಗತ್ತನ್ನು ಅನುಭವಿಸಿದನು ಕಡೆಗೆ ಲೋಕವನ್ನು ಬಿಟ್ಟು ಇಂದ್ರಿಯಾತೀತವಾದ ಸ್ವರ್ಗಲೋಕವನ್ನು ಸೇರಿದನು. ಸ್ವರ್ಗಲೋಕದಲ್ಲಿ ಸಂಪೂರ್ಣ ಕಾಮನೆಗಳನ್ನು ಪಡೆದು ಅಮರನಾದನು, ಅಮರನಾದನು. ಇಲ್ಲಿ ಸ್ವರ್ಗಲೋಕವೆಂದರೇನು? — ಆತ್ಮಲೋಕವೆಂತಲೇ ತಿಳಿಯಬೇಕು. ಸರ್ವ ಕಾಮನೆಗಳೆಂದರೇನು?– ಯಾವ ಎಲ್ಲ ಬಯಕೆಗಳು ಆತ್ಮಾನಂದದ ಅಂತರ್ಗತವಾಗಿರುವುದೋ ಆ ಆತ್ಮಾನಂದವೆಂತಲೇ

ತಿಳಿಯಬೇಕು. (ಹೇಗೆ ಸೂರ್ಯನು ತನ್ನ ಮನೆಯಲ್ಲಿ ದೀಪ ಹತ್ತಿಸಲು ಬಯಸುವುದಿಲ್ಲವೋ ಹಾಗೆ ತತ್ತ್ವವೇತ್ತನು ಆನಂದ ರೂಪವೇ ಆಗಿರೋಣ ಯಾವ ಕಾಮನೆಯು ಬಯಸನು.) (ಅಮೃತವೇ ತಾನಾದವನ ಹತ್ತಿರ ಕ್ಷುದಾತೃಷೆಗಳು ಹೇಗೆ ಸೇರದೋ ಹಾಗೆ ಅವನ ಹತ್ತಿರ ಕಾಮನೆಗಳು ಸೇರದು).

**ಶಾಂತಿ ಪಾಠ**

ಓಂ ವಾಜ ಮೆ ಮನಸಿ ಪ್ರತಿಷ್ಠಿತಾ। ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ । ವೇದಸ್ಯಮ ಆಣೀಸ್ಥಃಶ್ರುತಂ ಮೆಮಾ ಪ್ರಹಾಸೀಃ । ಅನೇನಾಧೀತೇನಾಹೋರಾತ್ರಾನ್ ಸನ್ದಧಾಮ್ಯೃತಂವದಿಷ್ಯಾಮಿ ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಮ್ ॥

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ

**ಅದ್ವೈತ ಶಿಖಾಮಣಿ ಬ್ರಂ ಶ್ರೀ ಶಿವಾನಂದ ಸ್ವಾಮೀಜಿಯವರು ಐತರೇಯ ಉಪನಿಷತ್ತಿಗೆ ಬರೆದ ಅನುವಾದವು ಪೂರ್ಣವಾಯಿತು.**

ಹರಿವರ್ಮಗಾರಿ

ಯುಗಾಂತರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೨.

# ಸ್ವಾಮಿಜಿಯವರ ಸಂಕ್ಷಿಪ್ತಪರಿಚಯ

ಅದ್ವೈತಶಿಖಾಮಣಿ ವೆ.ಬ್ರ. ಶ್ರೀ ಶಿವಾನಂದಸ್ವಾಮಿಜಿಯವರು ಸುಲಭದಲ್ಲಿ ಮಹತ್ತನ್ನು ತಿಳಿಸಬಲ್ಲ ಅರೋಕ್ಷಜ್ಞಾನಿಗಳಾದ ಮಹದ್ವಿಭೂತಿಗಳ ಸಾಲಿಗೆ ಸೇರಿದವರು. ಕಬ್ಬನ್ನು ಬೆಳೆದು ಸಾರವನ್ನು ತೆಗೆದು ಪಾಕವನ್ನು ಮಾಡಿ ನೀಡಬಲ್ಲ ಸಾರಜ್ಞರಿವರು. ಎಲ್ಲರಿಗೂ ಯಾವುದು ಉಕ್ಕಿನ ಕಡಲೆಯೋ ಇವರಿಗದು ಉಷ್ಣವಳಿದ ಸಕ್ಕರೆ ಹಾಕಿದ ಹಾಲು. ಪಂಡಿತರ ಶ್ರೇಣಿಯಲ್ಲಿ ವಾಸಮಾಡಿ ವಾಗ್ಮಿಯತೆಯಲ್ಲಿ ವಿಶಿಷ್ಠಸ್ಥಾನವನ್ನು ಪಡೆದ ಮಹದ್ವ್ಯಕ್ತಿ ಇವರು. ಇವರು ಕೇವಲ ಬರಹಗಾರರಲ್ಲ. ಸಾಧಕರು ಹೌದು. ಸಾಧಿಸಿ ಸಾಧ್ಯದ ಸ್ವರೂಪವನ್ನು ಪಡೆದವರು. ಶುದ್ಧಾತ್ಮಾನುಭವಿಗಳು. ಇವರ ಸಂಸ್ಕೃತ ಭಾಷಾ ಪಾಂಡಿತ್ಯದಿಂದ ಕನ್ನಡಕ್ಕೆ ಬಹಳ ಉಪಕಾರವಾಗಿದೆ. ಇವರು ಉಪನಿಷದ್ಗಳ ಸಾರವನ್ನು ಕಡೆದು ರಸವತ್ತಾದ ಭಾಷೆಯಲ್ಲಿ ಕನ್ನಡದ ಓದುಗರಿಗೆ ಉಣಬಡಿಸಿ ಮುಮುಕ್ಷುಗಳಿಗೆ ದಾರಿ ತೋರುವ ಮಹೋಪಕಾರವನ್ನು ಎಡಬಿಡದೆ ಮಾಡುತ್ತಿದ್ದಾರೆ. ಶಂಕರನ ಉಪಾಸನೆಯನ್ನು ಮಾಡಿ ಶಂಕರರನ್ನು ಅರಿತು ಶಂಕರರ ಹೃದಯವನ್ನು ಬರೆದಿದ್ದಾರೆ. ಆತ್ಮಜ್ಞಾನೋದಯ ಬ್ರಹ್ಮಾನುಸಂಧಾನ, ಆತ್ಮಾನುಸಂಧಾನ, ಅದ್ವೈತ ಸಿದ್ಧಾಂತ, ಪ್ರಪಂಚ ಪರಿಚಯ, ದಕ್ಷಿಣಾ ಮೂರ್ತಿಸ್ತೋತ್ರ, ವಿಜ್ಞಾನಾನುಭವ, ಗುರ್ವಷ್ಟಕ ಸಾಧನ ಪಂಚಕ, ಕೌಪೀನ ಪಂಚಕ, ಮುಮುಕ್ಷುಮನನ, ಸಾಧನ ಸೋಪಾನ, ಸುದರ್ಶನ, ಬ್ರಹ್ಮಸೂತ್ರಾರ್ಥ ಪ್ರಕಾಶ, ಜನತಾ ರಾಮಾಯಣ ಮೊದಲಾದ ಆಧ್ಯಾತ್ಮಿಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ವೇದಾಂತ ಪ್ರಚಾರ ಪರಿಷತ್ತನ್ನು ಮತ್ತು ಉಪನಿಷತ್ಪ್ರಚಾರ ಪರಿಷತ್ತನ್ನೂ ಸಹ ಸ್ಥಾಪಿಸಿದ್ದಾರೆ. ಉಪನಿಷತ್ತುಗಳಲ್ಲಿ ತೈತ್ತಿರೀಯ ಐತರೇಯ ಉಪನಿಷತ್ತು ಸೇರಿ ಎಂಟು ಉಪನಿಷತ್ತುಗಳ ಸಾರ ಸಂಗ್ರಹವನ್ನು ಇದುವರೆಗೆ ನೀಡಿದ್ದಾರೆ.

ಲೌಕಿಕವನ್ನು ಜೀರ್ಣಿಸಿಕೊಂಡು ಪಾರಮಾರ್ಥಿಕವನ್ನು ಸಾಧಿಸಿಕೊಂಡ ಬ್ರಹ್ಮನಿಷ್ಠಾ ಸ್ವಾಮಿಗಳಿವರು, ಲೋಕದ ವ್ಯಾಕುಲತೆಯಿಂದ ಜಿಗುಪ್ಸೆಹೊಂದಿ ಉದರವೈರಾಗ್ಯಕ್ಕೋಸ್ಕರ ಸನ್ಯಾಸವನ್ನು ಸ್ವೀಕರಿಸಿರುವವರ ಪಾಲಿಗೆ ಸೇರಿದವರು ಇವರಲ್ಲ.

ನಾನು ಪ್ರಜಾಮತ ಪತ್ರಿಕೆಯ ಸಂಪಾದಕನಾಗಿದ್ದಾಗ ಆದ ಪರಿಚಯ ಆತ್ಮಸಂಬಂಧವಾಗಿ ಬೆಳೆಯಿತು. ಇವರ ನಡೆನುಡಿಗಳು ನನ್ನ ಮನಸ್ಸಿಗೆ ಸಮಾಧಾನಕರವಾಗಿತ್ತು. ಕೇವಲ ನಿಷ್ಕಾಮರಿವರು. ,ತತ್ವನಿಷ್ಠಾಪರರು. ಪ್ರಜಾಮತದಲ್ಲಿ ಇವರು ಬರೆದ "ಜನತಾ ರಾಮಾಯಣ"ದ ಕೆಲವು ಭಾಗ ಧಾರಾವಾಹಿಯಾಗಿ ಪ್ರಕಟವಾಯಿತು. ಅದಲ್ಲದೆ ಶಂಕರ ಜಯಂತಿ ಸಂದರ್ಭ ಗಳಲ್ಲಿ ವಿಶೇಷ ಲೇಖನಗಳನ್ನೂ ಬರೆದಿದ್ದಾರೆ. ಗೀತೆಯಂತು ಇವರ ಆತ್ಮ. ಎಲ್ಲ ವೇದಾಂತದ ಮೂಲವನ್ನೂ ಹಿಡಿದು ಜನಸಾಮಾನ್ಯರಿಗೂ ವೇದಾಂತವು ಗಹನವಾಗದೆ ಸುಲಭವಾಗಲೆಂಬ ಉದ್ದಿಶ್ಯದಿಂದಲೇ ಇವರು, ಸಣ್ಣಪುಟ್ಟ ಅನೇಕ ವೇದಾಂತ ಗ್ರಂಥಗಳನ್ನು ಬರೆದಿರುತ್ತಾರೆ. ಭಕ್ತವೃಂದದವರ ಸಹಾಯದಿಂದ ಸುಲಭ ಬೆಲೆಯಲ್ಲಿ ಅಮೂಲ್ಯವಾದ ವೇದಾಂತದ ಸಾರವನ್ನು ಪ್ರಚುರಗೊಳಿಸು ತ್ತಿದ್ದಾರೆ. ಇವರ ಸೇವೆಯು ಅವರ್ಣನೀಯವಾದದ್ದು. ಇವರು ಮಾಡುತ್ತ ಲಿರುವ ಜನಸೇವೆ ಜನಾರ್ಧನನಿಗೆ ಮೆಚ್ಚಿತವಾದದ್ದು.

ಅವಕಾಶವನ್ನು ಇವರು ಹುಡುಕಬೇಕೆಂದು ಹೋಗಿಲ್ಲ. ಇವರನ್ನು ಅವಕಾಶ ಹುಡುಕಿಕೊಂಡು ಬಂದಾಗ ಇವರ ಆಧ್ಯಾತ್ಮಿಕ ಜ್ಞಾನಭಂಡಾರದಿಂದ ಅಮೃತವಾಹಿನಿಯು ಹರಿಯಬಹುದು.

ಸ್ವಾಮಿಜಿಯವರು ಅದ್ವೈತಶಿಖಾಮಣಿ ಎಂಬ ಬಿರುದನ್ನೂ ಸಂಪಾದಿಸಿ ಕೊಂಡಿರುತ್ತಾರೆ. ಆದರೂ ಶೀರ ಸಾಮಾನ್ಯರಂತೆ ಸರಳವಾಗಿ ಸರ್ವರಲ್ಲೂ ವ್ಯವಹರಿಸುತ್ತಾರೆ. ಇವರು ಇಹಪರಗಳೆರಡಕ್ಕೂ ಮಾರ್ಗದರ್ಶಕರಾಗಿದ್ದಾರೆ.

ಇಂತಹ ಅಮೂಲ್ಯ ಸೇವೆಯನ್ನು ಸ್ವಾಗತಿಸುವ ಪ್ರೋತ್ಸಾಹಿಸುವ ಮನೋಭಾವವನ್ನು, ಸರ್ಕಾರ ಮೊದಲಾಗಿ ಸಾಹಿತ್ಯ ಪರಿಷತ್ತು ಎರಡನೆಯ ದಾಗಿ, ಕೊನೆಗೆ ಮಠಾಧಿಪತಿಗಳು, ಹೀಗೆ ಮುಮ್ಮುಖವಾಗಿ ತೋರಿಸಿ ಕೊಟ್ಟು, ಇವರ ಜ್ಞಾನಸಾರವನ್ನು ಲೋಕಕ್ಕೆ ಒದಗಿಸಿಕೊಡಬೇಕು. ಶೃಂಗೇರಿ ಶ್ರೀ ಶ್ರೀ ಶ್ರೀ ಜಗದ್ಗುರುಗಳು ಈಗಾಗಲೇ ಆಶೀರ್ವಾದ ಮತ್ತು ಸಹಾಯ ಇವೆರಡು ನೀಡಿ ಇತರರಿಗೆ ಮಾರ್ಗದರ್ಶಿಗಳಾಗಿದ್ದಾರೆ. ಇವರ ಮುಂದಿನ ಗ್ರಂಥಗಳಿಗೂ ಸರ್ವರ ಸಹಾಯ ಅತ್ಯಗತ್ಯವಾದದ್ದು.

ಲೋಕೋಪಕಾರಕವಾದ ಇವರ ಸಾಹಸಕ್ಕೆ ಸರ್ವೇಶ್ವರನ ಆಶೀರ್ವಾದ ವಿದೆಯೆಂದು ಪ್ರಮಾಣ ಹೇಳಬೇಕಾಗಿಲ್ಲ.

ತಿ. ಸಿದ್ದಪ್ಪ,
ಸಂಪಾದಕ : ತಾಯಿನಾಡು.